


ಆನಂದವನ

# ನೇತಾಜಿ



ಭಿ. ಪ. ಕಾಳೆ

೮ ಆಣೆ



ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ.

# ನೇತಾಜಿ

ಅಥವಾ

# ಶಿವಾಜಿಯ ಬಲಗೈ.

(ಐತಿಹಾಸಿಕ ಕಾದಂಬರಿ)



ಲೇಖಕ ಮತ್ತು ಪ್ರಕಾಶಕ:

ಭಿ. ಪ. ಕಾಳೆ,

ಪ್ರೊಪ್ರಾಯಿಟರ, ಶ್ರೀ ಶೇಷಾಚಲ ಪ್ರೆಸ್ಸ,

ಆನಂದವನ.

[ ೧ನೇ ಆವೃತ್ತಿ ]

1939

ಬೆಲೆ ೮ ಆಣೆ



# ಪ್ರಸ್ತಾವನೆ

ಈ ಸುರಸವಾದ ಐತಿಹಾಸಿಕ ಕಾದಂಬರಿಯು ಕೆಲವು ವರ್ಷಗಳ ಹಿಂದೆ ನಮ್ಮ ನವಿಗಾರ ಎಂಬ ವಾರಪತ್ರಿಕೆಯಲ್ಲಿ ಭಾಗಶಃ ಪ್ರಸಿದ್ಧವಾಗಿ ಬಹುಜನರ ಆದರಕ್ಕೆ ಪಾತ್ರವಾಯಿತು. ಇದರಲ್ಲಿ ಶಿವಾಜಿಮಹಾರಾಜರ ಬಲಗೈ ಎಂದೆನಿಸಿಕೊಂಡ ನೇತಾಜಿಯ ಶೂರತನವು ವ್ಯಕ್ತವಾದ ಪ್ರಸಂಗಗಳ ವರ್ಣನೆಯಿರುವವಲ್ಲದೆ, ಕಾಶಿ ಹಾಗು ಗಂಗೂಸುಂದರಿಯರ ಉಜ್ವಲ ಪಾತಿವ್ರತ್ಯ ಪ್ರಭಾವವು ಪ್ರಕಟವಾಗಿರುತ್ತದೆ.

ಈ ಕಾದಂಬರಿಯ ಈ ಮೊದಲಿನ ಮೂರೂ ಆವೃತ್ತಿಗಳ ಪ್ರತಿಗಳು ತೀರಿ ವಾಚಕರ ಬೇಡಿಕೆಯು ಹೆಚ್ಚಿದ್ದರಿಂದ, ತಿದ್ದಿ ಸುಧಾರಿಸಿದ ಈ ನಾಲ್ಕನೇ ಆವೃತ್ತಿಯನ್ನು ಹೊರಡಿಸಲಾಗಿದೆ.

ಆನಂದವನ,
ತಾ॥ ೧೦-೯-೩೯

ಕನ್ನಡಿಗರ ಸೇವಕ,
ಕಾಳೆ.

# ನೇತಾಜಿ



# ನೇತ್ರಾಜಿ.

## ಅಪಹರಣ.

ಈ ಐತಿಹಾಸಿಕ ಕಥಾನಕವು ಯಾವ ಕಾಲಕ್ಕೆ ಸಂಭವಿಸಿತೋ, ಆ ಕಾಲವು ಸಂದು ಇಂದಿಗೆ ಎರಡುವರೆನೂರು ವರ್ಷಗಳಿಗಿಂತ ಹೆಚ್ಚು ಕಾಲವಾಗಿರುವದು. ಆ ಕಾಲವು ಮಹಾರಾಷ್ಟ್ರ ಭಾಗ್ಯೋದಯಕ್ಕೆ ಅರುಣೋದಯ ಸಮಯವಾಗಿದ್ದರೂ, ಆಗ ಆ ರಾಷ್ಟ್ರನಿವಾಸಿಗಳ ಹಿಂಸೆಗೆ ಎಣೆಯಿದ್ದಿಲ್ಲ. ಅನಿಯಂತ್ರಿತ ಬಾದಶಾಹೀ ರಾಜ್ಯಸತ್ತೆಯಿಂದ ಪ್ರಜೆಗಳು ತ್ರಸ್ತರಾಗಿದ್ದರು; ಆದರೂ ಮರಾಟರ ಕ್ಷಾತ್ರತೇಜದ ಕಾಂತಿಯು ಕಳೆಗುಂದದೆ, ಹೆಚ್ಚೆಚ್ಚು ಉದ್ದೀಪ್ತವಾಗುತ್ತ ನಡೆದಿತ್ತು. ಪೆಂಡಾರಿಗಳೂ, ಮುಸಲ್ಮಾನೀ ದಂಡಾಳುಗಳೂ ಹಿಂಡುಗಟ್ಟಿ ತಿರುಗಿ, ಹಳ್ಳಿಹಳ್ಳಿಗಳನ್ನು ಸುಲಿಯುತ್ತಿದ್ದರು; ಇಂದು ಈ ಊರು ಹಾಳಾಯಿತು, ನಾಳೆಗೆ ಯಾವ ಊರು ಹಾಳಾಗುವದೋ ಎಂದು ಜನರು ಬಾಯಲ್ಲಿ ಅಕ್ಕಿ ಕಾಳು ಹಾಕಿಕೊಂಡು ಕೂಡುತ್ತಿದ್ದರು. ಸುಂದರಿಯರಾದ ತರುಣ ಸ್ತ್ರೀಯರಿಗಂತೂ ಆ ಕಾಲವು ಪ್ರತ್ಯಕ್ಷ ಅಂತಕನ ಸ್ವರೂಪವಾಗಿತ್ತು! 'ಇಂದು ಇಂಥ ತರುಣಿಯನ್ನು ಮುಸಲ್ಮಾನರು ಹರಣ ಮಾಡಿದರು; ನಾಳೆಗೆ ಇಂಥ ತರುಣಿಯ ಸಲುವಾಗಿ ಇಂಥದೊಂದು ಊರಿಗೆ ಮುತ್ತಿಗೆ ಹಾಕುವರು' ಎಂಬ ಸುದ್ದಿಗಳ ಸುರಿಮಳೆಯಿಂದ ಆಗಿನ ತರುಣಿಯರ ಎದೆಯೊಡೆದು, ಅವರು "ದೇವರೇ! ನಮ್ಮನ್ನು ಯಾಕೆ ಹುಟ್ಟಿಸಿದೆ?" ಎಂದು ಪರಮೇಶ್ವರನಿಗೆ ಮೊರೆಯಿಡುತ್ತಿದ್ದರು! ಹೀಗೆ ತಮ್ಮ ಸ್ತ್ರೀಯರ ಮಾನಭಂಗ ಮಾಡುವ ಹಾಗು ತಮ್ಮ ಸಂಪತ್ತಿಯನ್ನಪಹರಿಸುವ ಮುಸಲ್ಮಾನ ದಂಡಾಳುಗಳನ್ನು ಮರಾಟರು ಬಹಳವಾಗಿ ದ್ವೇಷಿಸುತ್ತಿದ್ದರು. ಅತಿಶಯವಾದ ತೊಂದರೆಯ ಮೂಲಕ ಜೆಕ್ಕಿನಂಥ ಕ್ಷುದ್ರ

ಪ್ರಾಣಿಯೂ ಕೂಡ ರೌದ್ರತೆಯನ್ನು ತಾಳುತ್ತಿರುವಾಗ, ಮರಾಟರಂಥ ಕ್ಷಾತ್ರತೇಜವುಳ್ಳ ಮಾನವರು ಸಿಟ್ಟಿಗೇಳುವದು ಅಸ್ವಾಭಾವಿಕವಲ್ಲ. ಮುಸಲ್ಮಾನ ದಂಡಾಳುಗಳನ್ನು ಹಣಿಯಲಿಕ್ಕೆ ಅವರು ತಮ್ಮ ತಮ್ಮೊಳಗೆ ಒಳಸಂಚುಗಳನ್ನು ನಡೆಸುತ್ತಿದ್ದರು. ಹಿರಿಯರ ಈ ಅನುಕರಣದಿಂದ ಸಣ್ಣಮಕ್ಕಳೂ ತಮ್ಮ ಆಟಗಳಲ್ಲಿ ಹಿಂದು-ಮುಸಲ್ಮಾನರೆಂಬ ಪಂಗಡಗಳನ್ನು ಮಾಡಿಕೊಂಡು ಕಾಳಗಳನ್ನು ನಡೆಸುತ್ತಿದ್ದರು.

ಇಂಥ ದ್ವೇಷಮಯ ಕಾಲದಲ್ಲಿ ಒಂದು ದಿನ ಸಂಜೆಯ ಮುಂದೆ ಚೌಕಗಾಂವದ ಮರಡಿಯ ಪ್ರದೇಶದಲ್ಲಿ ನಾಲ್ಕು ಬಂಡಿಗಳು ಸಾಗಿದ್ದವು: ಬಂಡಿಗಳಿಗೆ ಎತ್ತುಗಳನ್ನು ಹೂಡಿದ್ದರು. ಅವು ತಮ್ಮ ಹುರಿಗೆಜ್ಜೆಗಳ ಗತ್ತಿನಲ್ಲಿ ಹೆಜ್ಜೆಗಳನ್ನಿಕ್ಕುತ್ತ, ಒತ್ತರದಿಂದ ಮಾರ್ಗಕ್ರಮಿಸುತ್ತಿದ್ದವು. ಬಂಡಿಗಳ ಎಡಬಲಗಳಲ್ಲಿ ೨೦-೨೫ ಜನ ತರುಣ ಮರಾಟರು ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ನಡೆದಿದ್ದರು. ಎಲ್ಲಕ್ಕೂ ಮುಂದುಗಡೆಯಲ್ಲಿ ಓರ್ವ ಚಪಲ ತರುಣನು ಒಂದು ದೊಡ್ಡ ಕುದುರೆಯನ್ನೇರಿ ಸಾಗಿದ್ದನು. ಒಂದು ಸುಂದರವಾದ ಖಡ್ಗವು ಅವನ ಟೊಂಕದಲ್ಲಿ ನೇತಾಡುತ್ತಿತ್ತು. ಒಂದು ಭದ್ರವಾದ ಢಾಲು ಬೆನ್ನಿಗೆ ಅಲಂಕಾರಪ್ರಾಯವಾಗಿ ಒಪ್ಪುತ್ತಿತ್ತು. ಆ ತರುಣನು ನೆಟ್ಟಗೆ ದಾರಿಯನ್ನು ಕ್ರಮಿಸದೆ, ಅಗಾಗ್ಗೆ ಎಡಬಲಗಳಲ್ಲಿರುವ ದಿನ್ನೆಗಳನ್ನೇರಿ ಏನನ್ನೋ ನೋಡುತ್ತಿದ್ದನು.

ಹೀಗೆ ಬಂಡಿಗಳು ಸಾಗಿರುವಾಗ, ಒಂದು ಎತ್ತರವಾದ ಮರಡಿಯು ಹತ್ತಿತು. ನಾಲ್ಕೂ ಬಂಡಿಗಳು ಆ ಮರಡಿಯನ್ನೇರಿ ಸುರಕ್ಷಿತವಾಗಿ ಕೆಳಗಿಳಿದವು. ಅಷ್ಟರಲ್ಲಿ ಕುದುರೆಗಳ ಖುರಪುಟಗಳ ಅಸ್ಪಷ್ಟಧ್ವನಿಯು ಕೇಳಬರಹತ್ತಿತು. ಬಂಡಿಗಳನ್ನು ರಕ್ಷಿಸುತ್ತಿದ್ದ ತರುಣರ ಕಿವಿಗಳು ವಿಸ್ತೃತವಾದವು. ಮುಂಗಡೆಯಲ್ಲಿದ್ದ ಅಶ್ವಾರೂಢನಾದ ತರುಣನಂತೂ ಸಪ್ಪಳ ಕೇಳಬರುವ ದಿಕ್ಕಿಗೆ ಕಿವಿಗೊಟ್ಟು ಕೇಳತೊಡಗಿದನು. ಬರಬರುತ್ತ ಆ ಸಪ್ಪಳವು ಸ್ಪಷ್ಟವಾಗಿ ಕೇಳಬರಹತ್ತಿ, ಒಮ್ಮಿಂದೊಮ್ಮೆಲೆ ೫೦-೬೦ ಜನ ಮುಸಲ್ಮಾನ ದಂಡಾಳುಗಳು ಬಂದು ಆ ಬಂಡಿಗಳನ್ನು ಮುತ್ತಿದರು!

ಯಾವ ಸಂಕಟವು ತಮಗೆ ತಟ್ಟಬಾರದೆಂದು ಆ ಬಂಡಿಯ ರಕ್ಷಕರು ಜಾಗರೂಕರಾಗಿದ್ದರೋ, ಆ ಸಂಕಟವೇ ಮೂರ್ತಿಮಂತಾಗಿ ಎದುರಿಗೆ ಬಂದು ನಿಂತ ಬಳಿಕ ಮಾಡುತ್ತಾರೇನು? ಎಲ್ಲರ ಮೋರೆಗಳೂ ಝುರ್‍ರನೆ ಇಳಿದು, ಬಾಡಿ ಬತ್ತಿ, ಬಸಿದು ಹೋದವು! ಕೆಲವರು ಎರೆಯಿಂದ ಆಯುಧಗಳನ್ನು ಹಿರಿದು ಬಂಡಿಗಳ ಸುತ್ತುವರೆದು ನಿಂತರು. ಕೆಲವರು ಅಲ್ಲಿಂದ ಕಾಲ್ದೆಗೆದರು. ಬಂಡಿಯ ರಕ್ಷಕರು ಹಾಗು ಬಂಡಿಯೊಳಗಿನ ಸ್ತ್ರೀಯರು ಸಾದಾ ತರದ ಪೋಷಾಕನ್ನು ಧರಿಸಿದ್ದರಿಂದಲೂ, ಅವರ ಮೈಮೇಲೆ ವಸ್ತ್ರ-ಒಡವೆಗಳು ಇರದ್ದರಿಂದಲೂ ಈ ಮುತ್ತಿಗೆಯಿಂದ ತಮಗೇನೂ ಆರ್ಥಿಕ ಲಾಭವಿಲ್ಲೆಂದು ತಿಳಿದು ಆ ದಂಡಾಳುಗಳು ನಿರಾಶರಾದರು. ಅಷ್ಟರಲ್ಲಿ ಒಂದು ಬಂಡಿಯೊಳಗಿನ ಒಬ್ಬ ಸುಂದರಿಯು ಅವರ ದೃಷ್ಟಿಗೆ ಬಿದ್ದಳು. ಆ ಸುಂದರಿಯು ನೂತನ ತರುಣಿಯಾಗಿದ್ದಳು. ಅವಳ ಆ ಸೌಂದರ್ಯವನ್ನು ನೂತನ ಪ್ರಾಯವು ಅಲಂಕರಿಸಿದ್ದಲ್ಲದೆ, ಆ ನೂತನ ಪ್ರಾಯವನ್ನು ಬೆಲೆಯುಳ್ಳ ವಸ್ತ್ರಾಭರಣಗಳೂ ಅಲಂಕರಿಸಿದ್ದವು. ಆದ್ದರಿಂದ ಆ ಸುಂದರಿಯು ಆ ಕಾಮುಕರ ಕಣ್ಣಲ್ಲಿ ಒತ್ತಲಾರಂಭಿಸಿದಳು. ಆ ಸುಂದರಿಯು ಅವರ ಕಣ್ಣಿಗೆ ಬಿದ್ದದ್ದೊಂದೇ ತಡ, "ಕ್ಯಾ ಖುಬ್ ಸೂರತ ಔರತ ಹೈ!" ಎಂದು ನುಡಿಯುತ್ತ, ಅವರೆಲ್ಲರೂ ಆ ಬಂಡಿಯ ಬಳಿಯಲ್ಲಿಯೇ ಸೇರಿದರು. ಹೀಗೆ ಆ ದಂಡಾಳುಗಳು ಆ ಮುಖ್ಯ ಸ್ತ್ರೀ ಇದ್ದ ಆ ಬಂಡಿಯೊಂದನ್ನೇ ಮುತ್ತಲು, ಉಳಿದ ಬಂಡಿಯೊಳಗಿನ ಜನರು ಸಪ್ಪಳಿಲ್ಲದೆ ಇಳಿದು, ದಾರಿ ಸಿಕ್ಕತ್ತ ಓಡಿದರು. ಓಡುವಾಗ ಕೆಲವರು ದುಷ್ಟರಾದ ಆ ಯವನರ ಪೆಟ್ಟುಗಳಿಗೆ ತುತ್ತಾಗಿ ಅಲ್ಲಿಯೇ ಮಡಿದರು!

"ಜೀವವು ಬೆಲ್ಲಕ್ಕಿಂತ ಸವಿಯೆ"ಂಬ ಗಾದೆಯು ಅನುಭವಸಿದ್ಧವಾದದ್ದು. ತನ್ನ ಜೀವವು ಹೋಗುವದೆಂದು ತಿಳಿದರೆ, ಯಾರು ಯಾರನ್ನೂ ಲೆಕ್ಕಿಸುವದಿಲ್ಲ. ಅದರಂತೆ ಈ ನಮ್ಮ ಬಂಡಿಯವರೂ ಆಚರಿಸಿದರು. ಅರೆಕ್ಷಣದಲ್ಲಿ ಎಲ್ಲರೂ ಅಲ್ಲಿಂದ ಕಾಲ್ದೆಗೆದರು. ಬಂಡಿಯಲ್ಲಿದ್ದ ಆ ಸುಂದರಿಯನ್ನು ಆ ದಂಡಾಳುಗಳು ಪ್ರತಿಬಂಧಿಸಿದ್ದರಿಂದ,

ಅವಳು ಮಾತ್ರ ದುಃಖಿಸುತ್ತ ಅಲ್ಲಿಯೇ ಉಳಿಯಬೇಕಾಯಿತು. ಆಕೆಯ ರಕ್ಷಕರಲ್ಲಿ ಅಶ್ವಾರೂಢನಾದ ತರುಣನೊಬ್ಬನು ಮಾತ್ರ ಉಳಿದನು. ಈ ಕಠಿಣ ಪ್ರಸಂಗದಿಂದ ಹೇಗೆ ಪಾರಾಗಬೇಕೆಂದು ಅವನು ದಿಕ್ಕುತಪ್ಪಿ ನಿಂತುಕೊಂಡಿದ್ದನು. ಅವನಿಗೆ ಆ ಅಬಲೆಯೋರ್ವಳನ್ನೇ ಬಿಟ್ಟು ಹೋಗುವದಕ್ಕೆ ಮನಸ್ಸಾಗಲೊಲ್ಲದು. ಅವನ ಅಂತಃಕರಣವು ಅಷ್ಟೊಂದು ನಿರ್ಬಲವೂ ಹೇಡಿಯೂ ಆಗಿದ್ದಿಲ್ಲ.

ಈ ವಿಲಕ್ಷಣ ಪ್ರಸಂಗದಿಂದ ಆ ಸುಂದರಿಯು ಪ್ರಜ್ವಲಿಸುವ ಅಗ್ನಿಯಲ್ಲಿ ಸಿಕ್ಕ ಎಳೆ ಎರಳೆಯಂತೆ ಅತ್ಯಂತ ದುಃಖಿತಳಾಗಿದ್ದಳು. ಅವಳಿಗೆ ಆಕಾಶವೇ ಮೈಮೇಲೆ ಕಳಚಿಬಿದ್ದ ಹಾಗಾಗಿತ್ತು; ಪಾಪ! ಆ ಅಬಲೆಯು ಏನು ಮಾಡಿಯಾಳು? ಎಲ್ಲರೂ ತನ್ನನ್ನು ಬಿಟ್ಟು ಓಡಿಹೋಗಿದ್ದು, ತನ್ನ ಅಣ್ಣನಾದ ನೇತಾಜಿಯೊಬ್ಬನು ಮಾತ್ರ ತನ್ನ ಸಲುವಾಗಿ ನಿಂತಿರುವನೆಂಬದು ತಿಳಿಯಲು, ಅತ್ಯಂತ ದುಃಖದಿಂದ ಆಕೆ "ಅಣ್ಣಾ" ಎಂದು ಒಮ್ಮೆ ಒದರಿದಳು. ತಂಗಿಯು ಈ ರೀತಿ ಕೂಗಲು, ನೇತಾಜಿಯು ದೇಹದ ಪರಿವೆಯನ್ನು ಬಿಟ್ಟು ಟಣ್ಣನೆ ಕುದುರೆಯಿಂದ ಹಾರಿಕೊಂಡು, ಆಕೆಯ ಬಳಿಗೆ ಬಂದು ನುಡಿದನೇನಂದರೆ:—"ಗಂಗಾ, ಅಂಜಬೇಡ; ನಿನ್ನನ್ನು ಬಿಟ್ಟು, ಎಲ್ಲರು ಓಡಿ ಹೋದರೂ, ನಾನು ನನ್ನ ದೇಹದಲ್ಲಿ ಜೀವವಿರುವವರೆಗೂ ನಿನ್ನನ್ನು ಬಿಟ್ಟು ಕದಲುವದಿಲ್ಲ. ಬಂದ ಪ್ರಸಂಗಕ್ಕೆ ಎದೆಗೊಟ್ಟು ನಿಂತ ಹೊರತು ಗತ್ಯಂತರವಿಲ್ಲ!"

ನೇತಾಜಿಯು ಈ ಪ್ರಕಾರ ತನ್ನ ತಂಗಿಗೆ ಸಮಾಧಾನ ಹೇಳುತ್ತಿರಲು, ಆ ಮುಸಲ್ಮಾನ ದಂಡಾಳುಗಳ ನಾಯಕನು ಒಳ್ಳೇ ಡೌಲಿನಿಂದ ಮುಂದೆ ಬಂದು ಉದ್ದಾಮತನದಿಂದ ನುಡಿದನೇನಂದರೆ:— "ಎಲೋ, ಈಗ ನೀನು ಯಾರ ವಶದಲ್ಲಿರುವೆಯೆಂಬುದು ನಿನಗೆ ಗೊತ್ತಿರುವದೇನು? ನಾವು ವಿಜಾಪುರ ಬಾದಶಹನ ದಂಡಾಳುಗಳಿರುತ್ತೇವೆ. ನಿನ್ನ ಹಾಗು ನಿನ್ನ ತಂಗಿಯ ಸುದೈವದಿಂದಲೇ ನಮ್ಮ ನಿಮ್ಮ ಸಂಘಟನವಾಗಿರುತ್ತದೆಂದು ತಿಳಿ. ನಾವು ಈ ನಿನ್ನ ತಂಗಿಯನ್ನು ವಿಜಾಪುರಕ್ಕೆ ಒಯ್ಯುತಕ್ಕವರು. ಅಲ್ಲಿ ಒಬ್ಬ ದೊಡ್ಡ ಸರದಾರನ

ಜೊತೆಗೆ ಬಾದಶಹನ ದರಬಾರದಲ್ಲಿ ಈಕೆಯ: ನಿಕಾ ಮಾಡಲ್ಪಡುವದು. ನಿನ್ನ ತಂಗಿಯು ಒಬ್ಬ ದೊಡ್ಡ ಸರದಾರನ ಹೆಂಡತಿಯಾದ ಬಳಿಕ, ನಿನ್ನ ವೈಭವಕ್ಕೆ ಕೊರತೆಯೇನು? ಅಲ್ಲಿ ನೀನು ಎರಡುನೂರು ಜನ ಕುದುರೆಯ ಸ್ವಾರರ ಮೇಲೆ ನಾಯಕನಾಗುತ್ತೀ; ಆದರೆ ನೀನು ಯಾವಾಗ ನಾಯಕನಾಗುವಿಯೆಂಬುದು ನಿನಗೆ ಗೊತ್ತಾಯಿತೇನು? ಯಾವಾಗ ನೀನು ನಿನ್ನ ಈ ಕಾಫರ ಜಾತಿಯನ್ನು ಬಿಟ್ಟು, ನಮ್ಮ ಮಹಮ್ಮದೀ ಧರ್ಮವನ್ನು ಸ್ವೀಕರಿಸುವಿಯೋ, ಆಗ ನೀನು ನಮ್ಮ ಬಾದಶಹನ ದರಬಾರದಲ್ಲಿ ಆ ನಾಯಕ ಪದವಿಯನ್ನು ಹೊಂದುತ್ತೀ! ನಿನಗೆ ನನ್ನ ಮಾತುಗಳು ಅಸಹ್ಯಕರವಾಗಿ ತೋರುತ್ತಿರಬಹುದಲ್ಲವೆ? ಆದರೆ ಹಾಗೆ ಮಾಡದ ಹೊರತು ಗತ್ಯಂತರವಿಲ್ಲ. ಎಷ್ಟೋ ಜನ್ಮ ದೊಡ್ಡ ದೊಡ್ಡ ಮರಾಟಾ ಸರದಾರರು ನಮ್ಮ ಮಹಮ್ಮದೀಯ ಧರ್ಮವನ್ನು ಸ್ವೀಕರಿಸಿ, ತಮ್ಮ ಹೆಣ್ಣುಮಕ್ಕಳನ್ನು ಪ್ರತಿಷ್ಠಿತ ಮುಸಲ್ಮಾನ ಸರದಾರರಿಗೆ ಕೊಡುತ್ತಲಿದ್ದಾರೆ ಅಂದಮೇಲೆ ನಿನ್ನಂಥ ಕ್ಷುದ್ರನನ್ನು ಅದಾರು ಕೇಳಬೇಕು? ನೀನು ನಮ್ಮ ಮಾತಿನಂತೆ ನಡೆದುಕೊಂಡರೆ, ನಿನ್ನ ಮೇಲೆ ಬಾದಶಹನ ಮರ್ಜಿಯಾಗಿ, ಮುಂದೊಂದು ದಿನ ನೀನು ದೊಡ್ಡ ಸರದಾರನಾದರೂ ಆಗಬಹುದು. ಆದ್ದರಿಂದ ಈಗ ನೀನು ನಿನ್ನ ಈ ತಂಗಿಯನ್ನು ನಿನ್ನ ಕುದುರೆಯ ಮೇಲೆ ಕುಳ್ಳಿರಿಸಿಕೊಂಡು ನಮ್ಮ ಜೊತೆಯಲ್ಲಿ ವಿಜಾಪುರಕ್ಕೆ ನಡೆ.''

ಆ ಮುಸಲ್ಮಾನ ನಾಯಕನ ಆ ಮಾತುಗಳನ್ನು ಕೇಳುತ್ತ ನೇತಾಜಿಯು ನಿಂತುಕೊಂಡದ್ದು ನಿಜ; ಆದರೆ ಆ ನಾಯಕನ ಪ್ರತಿಯೊಂದು ಶಬ್ದದಿಂದ ಅವನ ರಕ್ತವು ಬಿಸಿಯಾಗಹತ್ತಿ, ಕೊನೆಗೆ ಅವನು ತಪ್ತನಾದನು. ಅಚ್ಚ ಮರಾಟಾ ರಕ್ತದ ಕೆಚ್ಚೆದೆಯ ಆ ವೀರನು, ಆ ಅಪಮಾನ ಕಾರಕ ನುಡಿಗಳಿಂದ ದೇಹಭಾನವನ್ನು ಮರೆತುಬಿಟ್ಟನು; ಮತ್ತು ಅತ್ಯಂತ ರೌದ್ರತೆಯನ್ನು ತಾಳಿ, ವಿದ್ಯುದ್ವೇಗದಿಂದ ತನ್ನ ಒರೆಯಿಂದ ಖಡ್ಗವನ್ನು ಹಿರಿದು, ಒಮ್ಮೆಲೆ ಆ ನಾಯಕನ ಮೇಲೆ ಬಿದ್ದು, ಒಂದೇ ಹೊಡತಕ್ಕೆ ಅವನನ್ನು ಎರಡು ತುಂಡು ಮಾಡಿ ಚಲ್ಲಿದನು! ನೇತಾ

ಜಿಯ ಈ ಭಯಂಕರ ಚಪಲತೆಯನ್ನು ನೋಡಿ ಎಷ್ಟೋ ಜನ ಮುಸಲ್ಮಾನ ಶಿಪಾಯಿಗಳು ಅಂಜಿ ಹಿಂದಕ್ಕೆ ಕಾಲ್ದೆಗೆದರು; ಆದರೆ ಆತನು ಒಬ್ಬನೇ ಆಗಿದ್ದರಿಂದ, ಅನೇಕ ಜನ ಮುಸಲ್ಮಾನರು ಧೈರ್ಯದಿಂದ ಅವನ ಮೇಲೆ ಖಡ್ಗವನ್ನೆತ್ತಿದರು. ನೇತಾಜಿಯು ತನ್ನ ಅತುಲ ಪರಾಕ್ರಮವನ್ನು ಪ್ರಕಟ ಮಾಡಿದನು. ಆತನ ಖಡ್ಗಕ್ಕೆ ಎಷ್ಟೋ ಜನ ಮುಸಲ್ಮಾನರು ಬಲಿಯಾದರು; ಆದರೆ ಒಬ್ಬನು ೫೦ ಜನ ಶತ್ರುಗಳಿಗೆ ಹೇಗೆ ಈಡಾಗುವನು? ದೀಪವು ತನ್ನ ಮೇಲೆ ಸಾಗಿ ಬರುವ ಪತಂಗದ ಸಮಾಚಾರವನ್ನು ತಕ್ಕೊಳ್ಳುವದೇನೋ ನಿಜ; ಆದರೆ ೨೫|೩೦ ಪತಂಗಗಳು ಬಂದು ಅದರ ಮೇಲೆ ಬಿದ್ದರೆ, ಆ ದೀಪವು ನಂದುವದಲ್ಲವೆ? ಅದರಂತೆ ನೇತಾಜಿಯ ಸ್ಥಿತಿಯೂ ಆಯಿತು. ಆತನ ವಿಜಶ್ರೀ ಖಡ್ಗವು ಶತ್ರುಗಳ ಗಂಟಲನ್ನು ಶೀಳಿ, ಹೊರಟ ನೆತ್ತರವನ್ನು ಗಟಗಟನೆ ಕುಡಿಯುತ್ತಿರಲು, ಅವನ ಢಾಲು ತುಂಡುತುಂಡಾಗಿ ಬಿದ್ದಿತು! ಆವೇಶಯುಕ್ತನಾದ ನೇತಾಜಿಯು ಮೈ ಮೇಲೆ ಎಚ್ಚರಿಕೆಯೇ ಇದ್ದಿಲ್ಲ. ಅವನು ಒಂದೇಸವನೆ ಶತ್ರುಸಂಹಾರದ ಕಾರ್ಯವನ್ನು ನಡಿಸಿದ್ದನು. ಅವನ ಮೈ ತುಂಬ ಬಲವಾದ ಗಾಯುಗಳಾಗಿದ್ದವು; ಸಾರಿಣಿಗೆಯೊಳಗಿಂದ ಧಾನ್ಯಗಳು ಸೋರುವಂತೆ, ಅವನ ಮೈಯೊಳಗಿಂದ ರಕ್ತದ ಬಿಂದುಗಳು ಧಾರೆಗಟ್ಟಿ ಉದುರುತ್ತಿದ್ದವು. ಅವನು ನಿರ್ವಿಣ್ಣನಾಗಿದ್ದನು. ಇಂಥ ಸ್ಥಿತಿಯಲ್ಲಿ ಒಬ್ಬ ಮುಸಲ್ಮಾನನ ಖಡ್ಗವು ಆಯಕಟ್ಟಿಗೆ ಬೀಳಲು, ನೇತಾಜಿಯು ಅವಸಾನಗೆಟ್ಟು ಒಮ್ಮೆಲೆ ನೆಲಕ್ಕುರುಳಿದನು! ನೇತಾಜಿಯ ಪತನದಿಂದ ಮುಸಲ್ಮಾನರಲ್ಲಿ "ಅಲ್ಲಾಹೋ ಅಕಬರ!" ಎಂಬ ಜಯುಜಯುಕಾರ ಧ್ವನಿಯು ಹೊರಟಿತು! ಬದುಕಿ ಉಳಿದ ಮುಸಲ್ಮಾನರು ವಿಜಯಶ್ರೀಯಿಂದ ಉಬ್ಬಿದರು. ಗಾಯು ಹೊಂದಿದವರು ತಮ್ಮ ಗಾಯುಗಳಿಗೆ ವನಸ್ಪತಿಯನ್ನು ಹಚ್ಚಿಕೊಳ್ಳಲಾರಂಭಿಸಿದ್ದರು. ಕಾಳಗದ ಕಣದಿಂದ ಮೊದಲೇ ಕಾಲ್ದೆಗೆದ ವೀರಶ್ರೇಷ್ಠರು ನೇತಾಜಿಯು ಬಿದ್ದದ್ದನ್ನು ಕೇಳಿ, ಧಾವಿಸಿ ಬಂದು ಗಂಗೆಯನ್ನು ಹೇಗೆ ಒಯ್ಯಬೇಕೆಂದು ಹಂಚಿಕೆ ಹಾಕಹತ್ತಿದರು! ಅವರಲ್ಲಿ ಒಬ್ಬನು ತನ್ನ ಸ್ನೇಹಿತನನ್ನು

ಕುರಿತು:—"ರುಸ್ತುಮ ಅಜಮಲ್ಲ, ಇವನು ಸೈತಾನನಿಗಿಂತ ಭಯಂಕರನು. ಈಗ ಮಾತ್ರ ನನ್ನ ಜೀವದಲ್ಲಿ ಜೀವಬಂದಂತಾಯಿತು. ಅಬ್ಬಾ! ಏನು ಭಯಂಕರ ಮನುಷ್ಯನಿವನು? ಎಂದು ನುಡಿದು, ಕೈಯೊಳಗಿನ ಭಲ್ಲೆಯಿಂದ ಸ್ಮೃತಿದಪ್ಪಿ ಬಿದ್ದಿದ್ದ ನೇತಾಜಿಯ ಕಂಕುಳಕ್ಕೆ ಇರಿಯ ಹೋದನು; ಆದರೆ ಗಾಳಿಯಿಂದ ನೇತಾಜಿಯ ಪಂಚೆಯು ಅಲ್ಲಾಡಲು, ಅವನು ಬೆಚ್ಚಿ ಬಿದ್ದು, ಹಿಂದಕ್ಕೆ ಸರಿದು:—"ರುಸ್ತುಮ, ಇನ್ನೂ ಈ ಸೈತಾನನು ಜೀವದಿಂದಿರುವನು" ಎಂದು ನುಡಿದನು. ಅವನ ಶೂರತನಕ್ಕೆ ರುಸ್ತುಮನು ನಕ್ಕು:—"ಶಾಬಾಸ್! ಮೃತಪಟ್ಟವನ ಹೊಟ್ಟೆಯಲ್ಲಿ ಭಲ್ಲೆಯನ್ನು ಚುಚ್ಚಿ ಪೌರುಷವನ್ನು ತೋರಿಸ ಹೋಗಿದ್ದೆಯಾ?" ಎಂದು ಉಪಹಾಸ ಮಾಡಿದನು. ಆದ್ದರಿಂದ ಆತನು ನಾಚಿಗೊಂಡು ರುಸ್ತುಮನೊಡನೆ ಗಂಗೆಯ ಕಡೆಗೆ ನಡೆದನು.

ನೇತಾಜಿಯ ಈ ಸ್ಥಿತಿಯನ್ನು ನೋಡಿ ಗಂಗೆಯ ಹರಣವು ಹಾರಿ ಹೋಗಿತ್ತು. ಅವಳ ಕಣ್ಣುಗಳೊಳಗಿಂದ ಒಂದೇಸವನೆ ಅಶ್ರುಗಳು ಸುರಿಯುತ್ತಿದ್ದವು. ಆಕೆಗಾದ ಆಗಿನ ದುಃಖವನ್ನು ವರ್ಣಿಸಲು ಶಕ್ಯವಿಲ್ಲ. ಅವಳು ಮಹಾಸಾಗರದಲ್ಲಿ ನಿರಾಶ್ರಿತಳಾಗಿ ನಿಂತಂತೆ, ಅಳುತ್ತ ನಿಂತುಬಿಟ್ಟಿದ್ದಳು; ಆದರೆ ಆ ದಂಡಾಳುಗಳು ಆಕೆಯ ಆ ದುಃಖದ ಕಡೆಗೆ ಲಕ್ಷ್ಯಗೊಡದೆ, ಅವಳನ್ನು ನೇತಾಜಿಯ ಕುದುರೆಯ ಮೇಲೆ ಕುಳ್ಳಿರಿಸಿಕೊಂಡು, ವಿಜಾಪುರದ ಕಡೆಗೆ ನಡೆದರು. ಕಾಳಗದಲ್ಲಿ ಸತ್ತವರನ್ನು ಸಂಸ್ಕರಿಸುವದಕ್ಕೆಂದು ಇಬ್ಬರು ಸಿಪಾಯಿಗಳು ಮಾತ್ರ ಅಲ್ಲಿ ಉಳಿದರು.



# ಬೈರಾಗಿಯ ವೇಷ.

ಚೌಕ ಗ್ರಾಮವು ಮಾಥೇರಾನ ಪರ್ವತದ ಗುಡ್ಡಗಾಡು ಪ್ರದೇಶದಲ್ಲಿರುವದು. ಈ ಗ್ರಾಮದಲ್ಲಿ ನೇತಾಜಿಯ ತಂದೆಯು ಇರುತ್ತಿದ್ದನು. ಅವನಿಗೆ ನೇತಾಜಿಯಲ್ಲದೆ, ಇನ್ನೊಬ್ಬ ಹೆಣ್ಣುಮಗಳಿದ್ದಳು. ಆಕೆಯ ಹೆಸರೇ ಗಂಗೆಯು. ಗಂಗೆಯು ದೊಡ್ಡವಳಾಗುತ್ತ ನಡೆದಂತೆ, ಆಕೆಯ ತಂದೆಗೆ ವಿಲಕ್ಷಣ ಚಿಂತೆಯುತ್ಪನ್ನವಾಗತೊಡಗಿತು. ಯಾಕಂದರೆ, ಆಗ ಅಲ್ಲಿ ವಿಜಾಪುರದ ಬಾದಶಾಹೀ ದಂಡಾಳುಗಳ ಕಾಟವು ಬಹಳವಾಗಿತ್ತು. ಸುಂದರಿಯರಾದ ಹೆಣ್ಣುಮಕ್ಕಳು ಮರ್ಯಾದೆಯಿಂದ ಪಾರಾಗುವದೇ ಕಠಿಣವಾಗಿತ್ತು. ಗಂಗೆಯು ೧೫ ವರ್ಷದ ತರುಣಿಯಾಗಿದ್ದಳು. ಆಕೆಯು ರೂಪದಿಂದ ಸುಂದರಿಯಾಗಿದ್ದಳು. ಈಕೆಯ ಮದುವೆಯನ್ನು ಮಾಡಿ, ಇವಳನ್ನೊಮ್ಮೆ ಗಂಡನ ಮನೆಗೆ ಕಳಿಸಿ ಕೊಟ್ಟೆನೆಂದರೆ, ತನ್ನ ಕೆಲಸವಾಯಿತೆಂದು ಆ ಮುದುಕನು ಯೋಚಿಸುತ್ತಿದ್ದನು. ಅಂಥ ಕಠಿಣ ಪ್ರಸಂಗವುಂಟಾಗಿದ್ದ ಆಗಿನ ಕಾಲದ ಯೋಗ್ಯ ಕಲ್ಪನೆಯು ಈಗ ನಮಗೆ ಬರುವದೆಂತು? ಇರಲಿ.

ಗಂಗೆಯ ತಂದೆಯು ಆಕೆಯನ್ನು ವಡಗಾಂವದ ಒಬ್ಬ ಶ್ರೀಮಂತ ತರುಣನಿಗೆ ಕೊಡುವವನ್ನು ನಿರ್ಧರಿಸಿದ್ದನು. ವಡಗಾಂವದವರು ಶ್ರೀಮಂತರಿದ್ದುದರಿಂದ, ಅವರು ಚೌಕಗ್ರಾಮಕ್ಕೆ ಲಗ್ನಕ್ಕಾಗಿ ಬರಲು ನಿರಾಕರಿಸಿದರು. ಮಗಳು ಚಲೋ ಮನೆಗೆ ಬಿದ್ದರೆ ಸಾಕೆಂದು ಗಂಗೆಯ ತಂದೆಯು ತಾನೇ ವಡಗಾಂವಕ್ಕೆ ನಿಬ್ಬಣ ಹೊರಡಿಸುವದನ್ನು ನಿಶ್ಚಯಿಸಿದನು. ಹಿಂದಿನ ಪ್ರಕರಣದಲ್ಲಿ ಮುಸಲ್ಮಾನರ ಮುತ್ತಿಗೆಯಲ್ಲಿ ಸಿಕ್ಕ ನಿಬ್ಬಣವು ಇದೇ ಎಂಬುದು ನಮ್ಮ ಚಾಣಾಕ್ಷ ವಾಚಕರ ಲಕ್ಷ್ಯದಲ್ಲಿ ಬಂದಿರಬಹುದು. ಗಂಗೆಯ ತಂದೆಯು ಮುದುಕನಾಗಿದ್ದನು. ಒಮ್ಮಿಂದೊಮ್ಮೆಲೆ ಗಂಟುಬಿದ್ದ ಮುಸಲ್ಮಾನ ದಂಡಾಳುಗಳನ್ನು ನೋಡಿ ಅವನಿಗೆ ದಿಕ್ಕುತಪ್ಪಿ ಹೋದಂತಾಯಿತು. ಆದ್ದರಿಂದ

ಆತನು ಹಿಂದುಮುಂದಿನ ವಿಚಾರವಿಲ್ಲದೆ, ಓಡಿ ಹೋದನು; ಆದರೆ ಮಗನನ್ನೂ ಮಗಳನ್ನೂ ಬಿಟ್ಟು ಆತನ ಕಾಲುಗಳು ಏಳಲೊಲ್ಲವು; ಅವನು ಅಲ್ಲಿಯೇ ಸಮೀಪದಲ್ಲಿ ಒಂದು ಪೆಳೆಯ ಮರೆಗೆ ಅಡಗಿಕೊಂಡನು. ನೇತಾಜಿಯು ಪ್ರಕಟಿಸಿದ ಶೂರತನವನ್ನೂ, ಆತನು ಮೂರ್ಛಾಗತ ನಾಗಿ ಬಿದ್ದದ್ದನ್ನೂ, ಮುಸಲ್ಮಾನರು ಗಂಗೆಯನ್ನು ಅಪಹರಿಸಿಕೊಂಡು ಒಯ್ದುದ್ದನ್ನೂ ಆ ಮುದುಕನು ಕುಳಿತಲ್ಲಿಂದಲೇ ಕಂಡು ಅತ್ಯಂತ ದುಃಖಾಕುಲನಾಗಿದ್ದನು. ಹೊತ್ತು ಮುಳುಗಿ ಕತ್ತಲೆಯು ಮುಸುಕಲು, ಆತನು ಮೆಲ್ಲನೆ ನೇತಾಜಿಯು ಬಿದ್ದಲ್ಲಿಗೆ ಬಂದನು. ಆಗ ಅಲ್ಲಿ ಕೇವಲ ಶಾಂತತೆಯು ನೆಲೆಗೊಂಡಿತ್ತು. ನೇತಾಜಿಗೂ ಮೃತಪಟ್ಟ ಸೈನಿಕರಿಗೂ ಮಣ್ಣು ಕೊಡಲಿಕ್ಕೆಂದು ಉಳಿದಿದ್ದ ಇಬ್ಬರು ಸಿಪಾಯರು ಗೊರಕೆ ಹೊಡೆಯುತ್ತ ಬಿದ್ದುಕೊಂಡಿದ್ದರು. ಆ ಮುದುಕನು ಕತ್ತಲಲ್ಲಿ ನೇತಾಜಿಯನ್ನು ಗೊತ್ತುಹಚ್ಚಿ, ಅವನ ಬಳಿಯಲ್ಲಿ ಕುಳಿತು, ದುಃಖವು ನಿಲ್ಲದ್ದರಿಂದ, 'ನೇತಾಜಿ, ನೇತಾಜಿ' ಎಂದು ಒದರಿ,-ಒದರಿ ಅಳಲಾರಂಭಿಸಿದನು. ಕರ್ಮಧರ್ಮ ಸಂಯೋಗದಿಂದ ನೇತಾಜಿಗೆ ಪ್ರಾಣಾಪಾಯವು ಸಂಭವಿಸುವಂಥ ಸ್ಥಿತಿಯೊದಗಿದ್ದಿಲ್ಲ; ಅವನು ಶಕ್ತಿಕ್ಷೀಣತೆಯಿಂದ ಮೂರ್ಛೆಹೊಂದಿದ್ದನಾದ್ದರಿಂದ, ರಾತ್ರಿಯ ತಂಗಾಳಿಯಿಂದ ಅವನು ಸ್ವಲ್ಪ ಚೇತರಿಸಿಕೊಂಡಿದ್ದನು; ಆದರೂ ಅವನಿಗೆ ಇನ್ನೂ ಗ್ಲಾನಿಯು ಬರುತ್ತಲೇ ಇತ್ತು. ನೇತಾಜಿಯ ತಂದೆಯು ಅವನ ಹತ್ತರ ಬಂದು ಅಳುತ್ತಿರುವಾಗ ಅವನು ಕಣ್ಣು ತೆರೆದಿದ್ದನು; ಆದರೆ ಮಾತಾಡುವಷ್ಟು ಶಕ್ತಿಯಿರಲಿಲ್ಲ. ಆ ಮುದುಕನಿಗೆ ತನ್ನ ಮಗನು ಕಣ್ಣು ತೆರೆದಿರುವನೆಂಬದು ಗೊತ್ತಾಗಲು, ಹಿಡಿಸಲಾರದಷ್ಟು ಆನಂದವಾಯಿತು! ಮಗನು ಮೃತಪಟ್ಟಿರುವನೆಂದೇ ಇದುವರೆಗೆ ತಿಳಿದಿದ್ದ ಆ ಮುದುಕನು ಕೂಡಲೆ ಎದ್ದು ನಿಂತು, ನೇತಾಜಿಯನ್ನು ಬೆನ್ನ ಮೇಲೆ ಹೊತ್ತುಕೊಂಡು ಮನೆಯ ದಾರೀ ಹಿಡಿದನು. ಆ ಕತ್ತಲಲ್ಲಿ ಹೇಗಾದರೂ ದಾರಿಯನ್ನು ತುಳಿಯುತ್ತ, ಆ ಮುದುಕನು ಮಗನ ಭಾರವನ್ನು ಸಹಿಸಿಕೊಂಡು, ಮನೆಯ ಬಾಗಿಲಿಗೆ ಬಂದನು. ಮನುಷ್ಯನಿಗೆ ಪುತ್ರವಾತ್ಸಲ್ಯವು ಎಲ್ಲಕ್ಕೂ ಹೆಚ್ಚಿನದು. ಅದು ವೃದ್ಧಾಪ್ಯ

ದಲ್ಲಂತೂ ತೀರ ಹೆಚ್ಚಾಗುವದು. ಅದರಲ್ಲೂ ಏಕಪುತ್ರವಿಷಯವಿದ್ದ ರಂತೂ ಆ ವಾತ್ಸಲ್ಯಕ್ಕೆ ಸೀಮೆಯೇ ಉಳಿಯುವದಿಲ್ಲ! ಈ ಪುತ್ರ ವಾತ್ಸಲ್ಯದ ಮೂಲಕವಾಗಿಯೇ ನೇತಾಜಿಯ ತಂದೆಯು ಮುಪ್ಪಿನವ ನಾಗಿದ್ದರೂ ಅಂಥ ಭಯಂಕರ ಸಾಹಸವನ್ನು ಮಾಡಿದನು.

ಮನೆಗೆ ಬಂದ ಬಳಿಕ ಅವನು ಮೆಲ್ಲನೆ ಹೆಂಡತಿಯನ್ನು ಒದರಿ ಬಾಗಿಲು ತೆರೆಯಿಸಿ, ನೇತಾಜಿಯನ್ನು ಮಲಗಿಸಿ ಅವನಿಗೆ ಮಾಡತಕ್ಕ ತಾತ್ಕಾಲಿಕ ಉಪಚಾರವನ್ನು ಮಾಡಿದನು. ನೇತಾಜಿಗೂ ಈಗ ಸ್ವಲ್ಪ ಸ್ವಲ್ಪ ಪ್ರಜ್ಞೆ ಬರಲಾರಂಭಿಸಿತ್ತು.

ನೇತಾಜಿಯ ತಂದೆಯು ಮಗನ ಆರೈಕೆಯನ್ನು ಮಾಡುತ್ತ ಆಗ ಸುಮ್ಮನೆ ಕೂಡ್ರುವ ಹಾಗಿದ್ದಿಲ್ಲ; ಯಾಕಂದರೆ, ಮಗನು ವಿಜಾಪುರದ ಬಾದಶಹನ ದಂಡಾಳುಗಳಲ್ಲಿ ಒಬ್ಬ ಪ್ರಮುಖನನ್ನು ಕೊಂದದ್ದಲ್ಲದೆ, ಹತ್ತಿಪ್ಪತ್ತು ಜನ ರಾಹುತರನ್ನೂ ಕೊಂದಿದ್ದನು. ಮೇಲಾಗಿ ತಾನು ಇಬ್ಬರು ಪಹರೆಯ ಸಿಪಾಯರಿಗೆ ಮಂಕುಬೂದಿ ಹಚ್ಚಿ ಬಂದವನಾಗಿ ದ್ದನು. ಬಾದಶಹನ ದಂಡು ಯಾವ ಕಾಲಕ್ಕೆ ಬಂದು ತನ್ನ ಮನೆಯನ್ನು ಮುತ್ತೀತೆಂಬ ನಿಯಮವಿದ್ದಿಲ್ಲ. ಆದ್ದರಿಂದ ನೇತಾಜಿಯು ಜೀವದಿಂದ ಮನೆಗೆ ಬಂದಿರುವನೆಂಬ ಸುದ್ದಿ ಸಹ ಬೇರೆಯವರಿಗೆ ಹತ್ತದಂತೆ ಅವ ನನ್ನು ಬೇರೆ ಕಡೆಗೊಯ್ದು ಸುರಕ್ಷಿತವಾದ ಸ್ಥಳದಲ್ಲಿಡಬೇಕಾಗಿತ್ತು. ಇದ ಕ್ಕಾಗಿ ಅವನು ಅದೇ ಕಾಲಕ್ಕೆ ತನ್ನ ಕೇವಲ ಸ್ನೇಹಿತರ ಮನೆಗೆ ಹೋಗಿ ಅವರೊಡನೆ ಆಲೋಚಿಸಿದನು. ಇಂಥ ಪರಿಸ್ಥಿತಿಯಲ್ಲಿ ನೇತಾಜಿ ಯನ್ನು ಯಾರು ಸಂರಕ್ಷಿಸಿಯಾರು? ಎಂಬ ಚಿಂತೆಯು ಅವರ ಸ್ನೇಹಿತ ರಿಗೂ ಉಂಟಾಯಿತು. ಆ ಚೌಕಗ್ರಾಮದಲ್ಲಿ ನೇತಾಜಿಯ ತಂದೆಗೆ ಮೂರು ಜನರು ಮಾತ್ರ ಜೀವಕ್ಕೆ ಜೀವ ಕೊಡುವ ಸ್ನೇಹಿತರಿದ್ದರು. ಅವರು ನೇತಾಜಿಯ ಬಳಿಗೆ ಬಂದರು. ನೇತಾಜಿಗೆ ತಂದೆಯ ಚಿಂತೆಯ ಕಾರಣವು ಗೊತ್ತಾಯಿತು. ಆಗ ಅವನು ತನ್ನ ಮನಸ್ಸಿನಲ್ಲಿ ಎಲ್ಲಿಗೆ ಹೋದರೆ ತನ್ನ ಜೀವಿತವು ಸುರಕ್ಷಿತವಾಗುವದು? ಎಂದು ಯೋಚಿಸ ಲಾರಂಭಿಸಿದನು.

ಚೌಕಗ್ರಾಮದಿಂದ ಮಾಥೇರಾನ ಗುಡ್ಡವು ೪-೫ ಮೈಲು ದೂರ ಇರುವದು. ಅಲ್ಲಿ ಒಬ್ಬ ಮಹಂತನಿದ್ದನು. ಆತನ ಪರಿಚಯವು ಎಡ-ಬಲದ ಹಳ್ಳಿಗಳಲ್ಲಿ ಯಾರಿಗೂ ಇದ್ದಿಲ್ಲ; ಆದರೆ ಆ ಗುಡ್ಡದ ಬಳಿಯಲ್ಲಿ ವಾಸಿಸುವ ಭಿಲ್ಲರಿಗೆ ಮಾತ್ರ ಆ ಮಹಂತನ ಪರಿಚಯವು ಚೆನ್ನಾಗಿದ್ದು, ಅವರು ಅವನ ವಿಷಯದಲ್ಲಿ ಬಹು ಭಕ್ತಿಯುಳ್ಳವರಾಗಿದ್ದರು. ಒಮ್ಮೆ ನೇತಾಜಿಯು ಸಹಜವಾಗಿ ಅಡ್ಡಾಡುತ್ತ ಮಾಥೇರಾನಕ್ಕೆ ಹೋದಾಗ, ಆ ಯೋಗಿಗಳನ್ನು ಕಂಡು ಅವರಲ್ಲಿ ಪೂಜ್ಯಬುದ್ಧಿಯನ್ನಿಟ್ಟಿದ್ದನು. ಆದ್ದರಿಂದ ಅವನು ಯಾವಾಗಾದರೊಮ್ಮೆ ಅವರ ದರ್ಶನಕ್ಕೆ ಹೋಗುವ ಪದ್ಧತಿಯನ್ನಿಟ್ಟುಕೊಂಡಿದ್ದನು. ಮಹಂತನು ಸಚ್ಛೀಲನೂ ತೇಜಸ್ವಿಯೂ ಇದ್ದದರಿಂದ, ನೇತಾಜಿಯಲ್ಲಿ ಅವನ ವಿಷಯವಾಗಿ ಬಹಳ ಶ್ರದ್ಧೆಯಿತ್ತು. ಮಹಂತನಾದರೂ ನೇತಾಜಿಯನ್ನು ಪ್ರೀತಿಸುತ್ತಿದ್ದನು. ಹೀಗಿರಲು, ನೇತಾಜಿಗೆ ಈ ಆಪತ್ತಿನಲ್ಲಿ ಆ ಮಹಂ-ತನನ್ನೇ ಆಶ್ರಯಿಸುವದು ಉಚಿತವೆಂದು ತೋರಿತು. ಕೂಡಲೆ ಅವನು ತನ್ನ ತಂದೆಗೆ ಆ ಮಹಂತನ ಸಂಗತಿಯನ್ನು ತಿಳಿಸಿ, ತನ್ನನ್ನು ಅಲ್ಲಿಗೆ ಕಳಿಸಬೇಕೆಂದು ಹೇಳಿದನು. ನೇತಾಜಿಯ ತಂದೆಗೂ ಅವನ ಸ್ನೇಹಿತರಿಗೂ ಅದು ಸಮ್ಮತವಾಯಿತು. ಇನ್ನು ರಾತ್ರಿಯು ಬಹಳವಿರದ್ದರಿಂದ, ಆದಷ್ಟು ಬೇಗನೆ ಜನರು ಏಳುವಷ್ಟರಲ್ಲಿಯೇ ನೇತಾಜಿಯನ್ನು ಊರ ಬಿಡಿಸಬೇಕಾಯಿತು. ಒಂದು ಸಣ್ಣ ಡೋಲಿಯನ್ನು ಸಿದ್ಧಪಡಿಸಿ, ಅದರಲ್ಲಿ ನೇತಾಜಿಯನ್ನು ಕೂಡ್ರಿಸಿದರು. ನೇತಾಜಿಯ ತಂದೆಯು ಮನೆಗೆ ಬಂದವರಿಗೆ ಉತ್ತರ ಕೊಡಲಿಕ್ಕೆ ಮನೆಯಲ್ಲಿಯೇ ಇರಬೇಕಾದ್ದರಿಂದ, ಅವನ ಇಬ್ಬರು ಸ್ನೇಹಿತರೇ ಆ ಡೋಲಿಯನ್ನು ಹೊತ್ತುಕೊಂಡು ನಡೆದರು. ೪-೫ ಮೈಲು ದಾರೀ ಕ್ರಮಿಸಿ ಗುಡ್ಡದ ಬಳಿಗೆ ಹೋಗಬೇಕಾದರೆ, ಅವರಿಗೆ ಸಾಕುಸಾಕಾಯಿತು. ಅಷ್ಟೊತ್ತಿಗೆ ನೂರು ತಾಸು ಹೊತ್ತು ಏರಿತ್ತು. ಮೈಗೆ ಬಿಸಿಲು ಹತ್ತಹತ್ತಿದ್ದರಿಂದಲೂ, ಸಾಮರ್ಥ್ಯವು ಕುಗ್ಗಿದ್ದರಿಂದಲೂ ಅವರು ಡೋಲಿಯನ್ನು ಮೇಲಕ್ಕೆ ಹೇಗೆ ಒಯ್ಯಬೇಕೆಂದು ಚಿಂತಿಸಹತ್ತಿದರು. ಅಷ್ಟರಲ್ಲಿ ಗುಡ್ಡದಲ್ಲಿರುವ ಭಿಲ್ಲರು ಅಡ್ಡಾ

ಡುವದು ಅವರಿಗೆ ಕಂಡಿತು. ಕೂಡಲೆ ಒಬ್ಬನು ಆ ಭಿಲ್ಲರ ಕಡೆಗೆ ಹೋಗಿ ನೀವು ಈ ಡೋಲಿಯನ್ನು ಮೇಲಕ್ಕೆ ಒಯ್ಯಬೇಕೆಂದೂ ಆ ಬಗೆ ನೀವು ಬೇಡಿದಷ್ಟು ಹಣವನ್ನು ನಿಮಗೆ ಕೊಡುತ್ತೇವೆಂದೂ ಹೇಳಿದನು. ಭಿಲ್ಲರು ಅದಕ್ಕೆ ಒಡಂಬಡಲಿಲ್ಲ; ಆದರೆ ವಿಚಾರಾಂತ್ಯದಲ್ಲಿ ಒಬ್ಬ ಬೇನೆಯ ಮನುಷ್ಯನು ಯೋಗಿವರ್ಯರ ದರ್ಶನಕ್ಕೆ ಬಂದಿರುವನೆಂಬದು ತಿಳಿಯಲು, ಅವರು ಆನಂದದಿಂದ ಆ ಕಾರ್ಯವನ್ನು ಮಾಡಲಿಕ್ಕೆ ಒಪ್ಪಿಕೊಂಡರು. ಯೋಗಿವರ್ಯರ ಮೇಲಿನ ಶ್ರದ್ಧೆಯಿಂದ ಅವರು ಆ ಡೋಲಿಯವರ ಕಡೆಯಿಂದ ಒಂದು ಕಾಸನ್ನೂ ತಕ್ಕೊಳ್ಳಲಿಲ್ಲ. ಗುಡ್ಡವನ್ನು ಏರುವದೆಂದರೆ, ಆ ಭಿಲ್ಲರಿಗೆ ಸಹಜ ಕೆಲಸವಾಗಿತ್ತು. ಆದ್ದರಿಂದ ಅವರು ನೇತಾಜಿಯ ಡೋಲಿಯನ್ನು ಹಾ ಹಾ ಅನ್ನುವಷ್ಟರಲ್ಲಿ ಯೋಗಿವರ್ಯರ ಗುಹೆಯವರೆಗೆ ಒಯ್ದು ಮುಟ್ಟಿಸಿದರು. ನೇತಾಜಿಯು ಡೋಲಿಯಿಂದಿಳಿದು, ಸಂಗಡಿಗರ ಸಹಾಯದಿಂದ ಯೋಗಿಗಳ ಬಳಿಗೆ ಹೋಗಿ ನಮಸ್ಕರಿಸಿದನು. ನೇತಾಜಿಯ ಆ ಅವಸ್ಥೆಯನ್ನು ನೋಡಿ ಯೋಗಿಗಳಿಗೆ ಆಶ್ಚರ್ಯವಾಯಿತು. ಭಿಲ್ಲರು ಹೊರಟು ಹೋದ ಬಳಿಕ ನೇತಾಜಿಯ ಜೊತೆಗಾರರು ಆ ಮಹಂತನಿಗೆ ಎಲ್ಲ ಸಂಗತಿಯನ್ನೂ ನಿವೇದಿಸಿದರು. ಅದನ್ನು ಕೇಳಿ ಆ ಮಹಂತನಿಗೆ ಬಹಳ ವಿಷಾದನೆನಿಸಿತು. ಬಳಿಕ ಆತನು ನೇತಾಜಿಗೆ ಅಭಯ ಕೊಟ್ಟು, ಕಳಿಸ ಬಂದವರಿಗೆ ಊರಿಗೆ ಹೋಗಲಿಕ್ಕೆ ಹೇಳಿದನು. ಇತ್ತ ನೇತಾಜಿಯು ಆ ಮಹಂತನ ಬಳಿಯಲ್ಲೇ ಸುರಕ್ಷಿತವಾಗಿ ಉಳಿದನು.

ತನಗೆ ಪೂರ್ಣ ಗುಣವಾಗಬೇಕಾದರೆ, ನಾಲ್ಕಾರು ತಿಂಗಳುಗಳಾದರೂ ಬೇಕಾಗಬಹುದೆಂದು ನೇತಾಜಿಯು ಮೊದಮೊದಲು ತಿಳಿದಿದ್ದನು; ಆದರೆ ಯೋಗಿಗಳ ಔಷಧದ ಸಾಮರ್ಥ್ಯದಿಂದ ಮುಂದೆ ಹದಿನೈದು ದಿವಸಗಳಲ್ಲಿಯೇ ಅವನಿಗೆ ಪೂರ್ಣ ಗುಣವಾಯಿತು. ಅವನು ಮಹಂತನ ಸಂಗಡ ಬೇಕಾದ ಹಾಗೆ ಅಡ್ಡಾಡ ಹತ್ತಿದನು. ನೇತಾಜಿಗೆ ಇಷ್ಟು ಬೇಗನೆ ಗುಣವಾದದ್ದನ್ನು ನೋಡಿ, ಆ ಮಹಂತನಿಗೂ ತುಂಬಾ ಸಂತೋಷವಾಯಿತು.

ನೇತಾಜಿಯು ಗುರುಸೇವೆಯಲ್ಲಿ ಆಸಕ್ತನಾದನು. ಆತನು ಮನೆ-ಮಾರುಗಳನ್ನು ಪೂರ್ಣವಾಗಿ ಮರೆತನು. ಅವನ ಅಧಿಕಾರವನ್ನು ತಿಳಿದು, ಯೋಗಿಗಳು ಅವನಿಗೆ ತುಸ ಮಟ್ಟಿಗೆ ಯ್ಯೋಗಾಭ್ಯಾಸವನ್ನು ಮಾಡಿಸಿದರಲ್ಲದೆ, ಯುದ್ಧಕಲೆಯನ್ನೂ ಕಲಿಸಿದರು. ಯೋಗಿಗಳು ನಾಮಾಕಿಂತ ಯೋದ್ಧಾಗಳಿರುವರೆಂಬದು ನೇತಾಜಿಯ ಅನುಭವಕ್ಕೆ ಬಂದಿತು. ಎರಡು ವರ್ಷಗಳೆಂದರೆ, ಎರಡು ಕ್ಷಣಗಳಂತೆ ನೇತಾಜಿಗೆ ಕ್ರಮಿಸಿದವು. ನೇತಾಜಿಯು ಯುದ್ಧಕಲಾವಿಶಾರದನೂ, ನೀತಿವಂತನೂ, ಪಾಪಭೀರುವೂ ಆದದ್ದನ್ನು ತಿಳಿದು, ಯೋಗಿಗಳು ಒಂದು ದಿವಸ ಅವನನ್ನು ಮುಂದಕ್ಕೆ ಕರೆದು ನುಡಿದರೇನಂದರೆ:—"ತಮ್ಮಾ ನೇತಾಜಿ, ನಾನು ಇನ್ನು ಮುದುಕನಾದೆನು. ನನ್ನ ದೇಹಾವಸಾನ ಕಾಲವು ಸಮೀಪಿಸಿರುವದು. ನಾನು ನಿನಗೆ ಇಂದಿನವರೆಗೆ ಮಾಡಿದ ಬೋಧವನ್ನು ನೆನಪಿನಲ್ಲಿಟ್ಟುಕೊಂಡು ನಡೆ. ಸನಾತನ ಧರ್ಮವನ್ನು ರಕ್ಷಿಸಲಿಕ್ಕೆ ಪ್ರಭುವು ಅವತರಿಸಿ ಬಂದಿರುವನು. ನಿನ್ನಂಥ ಶೂರ ತರುಣರ ಸಹಾಯವು ಆ ಪ್ರಭುವಿಗೆ ಅವಶ್ಯವಿರುತ್ತದೆ. ಆ ಪ್ರಭುವಿನ ಹೆಸರನ್ನು ನಾನೀಗ ನಿನಗೆ ಹೇಳುವದಿಲ್ಲ. ನನ್ನ ಪಶ್ಚಾತ್ ನೀನು ಇಲ್ಲಿ ಇರಕೂಡದು. ನಾನು ಕಲಿಸಿನ ಶಸ್ತ್ರವಿದ್ಯೆಯನ್ನು ದೇಶಹಿತಕ್ಕೆ ಉಪಯೋಗಿಸಿದರೆ, ನೀನು ನನಗೆ ಯೋಗ್ಯ ಗುರುದಕ್ಷಿಣೆ ಕೊಟ್ಟಂತಾಗುವದು."

ಈ ಮೇರೆಗೆ ನುಡಿದು, ಆ ಯೋಗಿಗಳು ಗುಹೆಯ ಬಳಿಯಲ್ಲಿರುವ ಝರಿಗೆ ಹೋಗಿ ಸ್ನಾನಮಾಡಿ, ಗುಹೆಗೆ ಬಂದು ದರ್ಭಾಸನ ಹಾಕಿಕೊಂಡು ಕುಳಿತರು; ಮತ್ತು ತಮ್ಮ ಯೋಗಸಾಮರ್ಥ್ಯದಿಂದ ಪ್ರಾಣವಾಯುವನ್ನು ಬ್ರಹ್ಮರಂಧ್ರಕ್ಕೆ ಏರಿಸಿ, ಜಡಶರೀರವನ್ನು ತ್ಯಜಿಸಿದರು! ಬಳಿಕ ನೇತಾಜಿಯು ಆ ಯೋಗಿಗಳ ಶವಸಂಸ್ಕಾರವನ್ನು ಅಲ್ಲಿಯ ಭಿಲ್ಲರ ಸಹಾಯದಿಂದಲೇ ಮಾಡಿದನು. ಭಿಲ್ಲಜನರು ಯೋಗಿಗಳು ದೇಹವನ್ನು ಬಿಟ್ಟಿದ್ದಕ್ಕೆ ವಿಷಾದಪಟ್ಟು, ನೇತಾಜಿಗೆ ಯೋಗಿವರ್ಯರ ಸ್ಥಳವನ್ನು ಕಾಯ್ದುಕೊಂಡಿರಲಿಕ್ಕೆ ವಿಜ್ಞಾಪಿಸಿಕೊಂಡರು. ನೇತಾಜಿ

ಯು ಯಾರೆಂಬದನ್ನು ಆ ಜನರು ತಿಳಿಯದವರಾಗಿದ್ದರು. ಈತನೊಬ್ಬನು ಯೋಗಿಮಹಾರಾಜರ ಯೋಗ್ಯ ಶಿಷ್ಯನೆಂದು ಭಾವಿಸಿದ್ದರಷ್ಟೇ. ನೇತಾಜಿಯು ತನ್ನ ಮೂಲ ರೂಪವನ್ನು ಯಾರಿಗೂ ತೋರಗೊಟ್ಟಿದ್ದಿಲ್ಲ. ಮುಂದೆ ೧೦-೧೫ ದಿವಸಗಳು ಕ್ರಮಿಸಿದ ಬಳಿಕ ನೇತಾಜಿಯು ಆ ಗುಹೆಯನ್ನು ತ್ಯಜಿಸುವ ಯೋಚನೆ ಮಾಡಿದನು. ಅಷ್ಟರಲ್ಲಿ ಒಬ್ಬ ಭಿಲ್ಲನು ಅವನ ಭೆಟ್ಟಿಗೆ ಬಂದನು. ಭಿಲ್ಲನು ನಮಸ್ಕರಿಸಿ ಕುಳಿತುಕೊಳ್ಳಲು, ನೇತಾಜಿಯು ಅವನ ಮುಂದೆ ತನ್ನ ಸ್ಥಲಾಂತರದ ವಿಚಾರವನ್ನು ತಿಳಿಸಿ, ಯೋಗಿಗಳು ತನಗೆ ಇಲ್ಲಿ ಇರಬೇಡವೆಂದು ಹೇಳಿರುವದಾಗಿ ತಿಳಿಸಿದನು. ಅದನ್ನು ಕೇಳಿ ಆ ಬಿಲ್ಲನು ವ್ಯಸನಪಟ್ಟು:-"ಮಹಾರಾಜ, ಗುರುಮಹಾರಾಜರ ಅಪ್ಪಣೆಯು ಹೀಗಿದ್ದ ಬಳಿಕ ಇದಕ್ಕೆ ಉಪಾಯವಿಲ್ಲ. ತಾವು ಇಲ್ಲಿ ಇದ್ದರೆ, ನಮಗೆ ಗುರುಮಹಾರಾಜರು ಇದ್ದಂತೆಯೇ ಆಗುತ್ತಿತ್ತು; ಉಪಾಯವಿಲ್ಲ! ತಾವು ಇಲ್ಲಿಂದ ಎಲ್ಲಿಗೆ ಹೋಗಬೇಕೆಂದು ಮಾಡಿರುವಿರಿ?" ಎಂದನು. ಆಗ ನೇತಾಜಿಯು: "ಚೌಕಗ್ರಾಮದಲ್ಲಿ ಇರಬೇಕೆಂದು ಮಾಡಿರುವೆನು; ಚೌಕಗ್ರಾಮವನ್ನು ನೀನು ಬಲ್ಲೆಯಾ?" ಎಂದು ಕೇಳಿದನು. ಭಿಲ್ಲನು :—"ಮಹಾರಾಜ, ಚೌಕಗ್ರಾಮವು ನಮಗೆ ಕೇವಲ ಪರಿಚಯದ ಸ್ಥಳವು; ಬಹಳ ಚಲೋ ಊರು; ಆದರೆ ಮುಸಲ್ಮಾನ ದಂಡಾಳುಗಳ ಉಪದ್ರವದಿಂದ ಈಗ ಆ ಊರು ಹಾಳಾಗುತ ಬಂದಿರುವದು. ಈಗೆರಡು ವರ್ಷಗಳ ಹಿಂದೆ ನೇತಾಜಿ ಎಂಬೊಬ್ಬ ತರುಣನು ವಿಜಾಪುರದ ಬಾದಶಹನ ದಂಡಾಳುಗಳ ಒಬ್ಬ ನಾಯಕನನ್ನು ಕೊಂದದ್ದರಿಂದ, ಆ ಊರಿಗೆ ಬಾದಶಹನ ಕಾಟವು ಬಹಳವಾಯಿತು. ನೇತಾಜಿಯು ಸತ್ತು ಹೋಗಿದ್ದರೂ ಅವನ ತಾಯಿ-ತಂದೆಗಳಿಗೆ ದಂಡಾಳುಗಳ ಕಾಟ ತಪ್ಪಿಲ್ಲ. ಮಹಾರಾಜ, ಮುಸಲ್ಮಾನ ದಂಡಾಳುಗಳು ಬಹಳ ದುಷ್ಟ ಸ್ವಭಾವದವರು. ಕಣ್ಣು-ಮೂಗು ನೆಟ್ಟಗಿದ್ದ ಹೆಂಗಸರನ್ನು ಕಂಡರೆ, ಅವರು ಬಿಡುವದೇ ಇಲ್ಲ. ನೇತಾಜಿಯ ತಂಗಿಯನ್ನು ಆ ದುಷ್ಟರು ಹರಣ ಮಾಡಿಕೊಂಡು ಹೋಗಿರುವರು." ಎಂದು ಹೇಳುತ್ತಿರಲು, ನೇತಾಜಿಗೆ ಸಂತಾ

ಪವು ಹೆಚ್ಚಿತು; ಆದರೂ ಅವನು ಅದನ್ನು ಭಿಲ್ಲನಿಗೆ ತೋರಗೊಡದೆ, ಅರಿಯದವನಂತೆ ಚೌಕಗ್ರಾಮದ ಬಗ್ಗೆ ತನಗೆ ಬೇಕಾದ ಸಂಗತಿಗಳನ್ನು ಕೇಳಿಕೊಂಡನು. ಎರಡು ವರ್ಷಗಳಾಗಿ ಹೋಗಿದ್ದರೂ ಅವನು ತಂದೆ-ತಾಯಿಗಳ ಭೆಟ್ಟಿಗೆ ಹೋಗಿರಲಿಲ್ಲ. ಅದ್ದರಿಂದ ಅವನಲ್ಲಿ ತಂದೆ-ತಾಯಿಗಳ ಭೇಟಿಯ ಕುತೂಹಲವು ಹೆಚ್ಚಿತು.

ಭಿಲ್ಲನು ಹೋದ ಬಳಿಕ ನೇತಾಜಿಯು ಗುಹೆಯನ್ನು ಬಿಡುವ ಸಿದ್ಧತೆಯನ್ನು ನಡೆಸಿದನು. ವೇಷಾಂತರದಿಂದಲೇ ಅವನು ಚೌಕ ಗ್ರಾಮಕ್ಕೆ ಹೋಗಬೇಕಾದ್ದರಿಂದ, ಯಾವ ವೇಷದಿಂದ ಹೋಗ ಬೇಕೆಂದು ಬಹಳ ಹೊತ್ತು ಯೋಚಿಸಿದನು; ಆದರೆ ಅವನು ಈಗ ಬೈರಾಗಿಯ ವೇಷದಿಂದಲೇ ಇದ್ದುದರಿಂದ, ಅದೇ ಅವನಿಗೆ ಉತ್ತಮ ವಾಗಿ ತೋರಿತು. ಆಗ ಅವನು ಜಡೆಗಳನ್ನು ಸರಿಮಾಡಿ ಕಟ್ಟಿ ಕೊಂಡನು. ಗುರುಗಳ ಪ್ರಸಾದರೂಪದಿಂದ ದೊರೆತ ಒಂದು ಖಡ್ಗ ಹಾಗು ಒಂದು ಭಲ್ಲೆ ಇವುಗಳನ್ನು ಸಂಗಡ ತಕ್ಕೊಳ್ಳಬೇಕೋ ಹೇಗೆ? ಎಂದು ಯೋಚಿಸಿ, ಕೊನೆಗೆ ತಕ್ಕೊಂಡು ಹೋಗುವವದನ್ನೇ ನಿರ್ಧರಿಸಿದನು. ಬಳಿಕ ಅವನು ವ್ಯಾಘ್ರಾಜಿನವನ್ನು ಬೆನ್ನಿಗೆ ಢಾಲು ಕಟ್ಟುವಂತೆ ಕಟ್ಟಿದನು. ಖಡ್ಗವನ್ನು ಒರೆಗಾಣಿಸಿ ಬಗಲಿಗೆ ಹಾಕಿದನು. ಭಲ್ಲೆಗೆ ಒಂದು ನಿಶಾನೆಯನ್ನು ಕಟ್ಟಿ ಅದನ್ನು ಕೈಯಲ್ಲಿ ಹಿಡಿದನು. ಕಾಲಲ್ಲಿ ಆವುಗೆಗಳನ್ನು ಮೆಟ್ಟಿಕೊಂಡನು. ಗುರುಗಳ ಆವುಗೆಗಳನ್ನು ಪೂಜೆಗಾಗಿ ತಕ್ಕೊಂಡನು. ಬಳಿಕ ಅವನು "ಭಮ್ ಭಮ್, ಬೋಲಾನಾಥ" ಎಂದು ನುಡಿಯುತ್ತ, ಗುಹೆಯಿಂದ ಹೊರಹೊರಟನು.

ಆ ಗುಹೆ ಬಿಟ್ಟು ಹೋಗುವಾಗ ನೇತಾಜಿಗೆ ಸ್ವಲ್ಪ ಅಸಮಾಧಾನ ವೆನಿಸಿತು; ಆದರೂ ಅದನ್ನು ಸಹಿಸಿಕೊಂಡು ಚೌಕಗ್ರಾಮವನ್ನು ಸಮೀಪಿಸಿದನು. ಗ್ರಾಮದ ಮುಂಗಡೆಯಲ್ಲಿ ಥಾವರಿ ಎಂಬ ನದಿಯು ಹರಿಯುತ್ತಿರುವದು. ನೇತಾಜಿಯು ಅಲ್ಲಿ ಕೈಕಾಲು ಮೋರೆ ತೊಳೆದು ಕೊಂಡು ಸ್ವಲ್ಪ ನೀರು ಕುಡಿದನು. ಬಳಿಕ ಅವನು ಊರಲ್ಲಿ ಪ್ರವೇಶ ಮಾಡಿದನು. ಪ್ರತಿಯೊಂದು ಮನೆಗೆ ಹೋಗಿ ಭಿಕ್ಷೆಯನ್ನು ಬೇಡುತ್ತ

ನಡೆದನು. ಓಣಿಯೊಳಗಿನ ಸಣ್ಣ ಹುಡುಗರು ಹಿಂಡುಗಟ್ಟಿ ಅವನ ಸುತ್ತಲೂ ನೆರೆದರು. ಎಷ್ಟೋ ಜನರು ನೇತಾಜಿಯ ಬಳಿಯಲ್ಲಿದ್ದ ಖಡ್ಗವನ್ನೂ ಭಲ್ಲೆಯನ್ನೂ ಕಂಡು, "ಬೈರಾಗಿಯ ಕೈಯಲ್ಲಿ ಇವೇಕೆ?" ಎಂದು ಪ್ರಶ್ನೆ ಮಾಡುತ್ತಿದ್ದರು. ಅವನು ಅವರಿಗೆ ಮೊದಲೇ ಗೊತ್ತು ಮಾಡಿಕೊಂಡ ಉತ್ತರವನ್ನು ಹೇಳುತ್ತಿದ್ದನು. ಏನಂದರೆ:—"ಪೂರ್ವದಲ್ಲಿ ಬೈರಾಗಿಗಳ ರಕ್ಷಣವನ್ನು ನಿಮ್ಮಂಥ ಕ್ಷಾತ್ರವೃತ್ತಿಯವರು ಮಾಡುತ್ತಿದ್ದರು; ಆದರೆ ನೀವು ಈಗ ಆ ಕೆಲಸವನ್ನು ಬಿಟ್ಟು, ಕೈಯಲ್ಲಿ ಬಳೆಗಳನ್ನಿಟ್ಟುಕೊಂಡು ಕುಳಿತದ್ದರಿಂದ, ನಮ್ಮ ರಕ್ಷಣೆಯನ್ನು ನಾವೇ ಮಾಡಿಕೊಳ್ಳಬೇಕಾಯಿತು." ಈ ಉತ್ತರದಿಂದ ಎಷ್ಟೋ ಜನರು ನಾಚಿಕೊಂಡು ಅವೇಶವನ್ನು ತಾಳುತ್ತಿದ್ದರು; ಕೆಲವರು ತಮ್ಮ ಪರತಂತ್ರ ಜನ್ಮಕ್ಕೆ ಧಿಃಕಾರವಿರಲೆಂದು ಅಂದುಕೊಳ್ಳುತ್ತಿದ್ದರು.

ನೇತಾಜಿಯ ಮನೆಯು ಚೌಕಗ್ರಾಮದ ಒಂದು ಮೂಲೆಯಲ್ಲಿತ್ತು. ಊರಲ್ಲೆಲ್ಲ ತಿರುಗಾಡಿ, ಸಂಜೆಯ ಮುಂದೆ ಆವನು ಅಲ್ಲಿಗೆ ಬಂದನು. ಅವನ ತಾಯಿಯು ಜೋಳವನ್ನು ಬೀಸುತ್ತ ತನ್ನ ಕಂದಮ್ಮನು ಎಲ್ಲಿದ್ದರೂ ಅವನಿಗೆ ಕಲ್ಯಾಣವಾಗಲೆಂಬರ್ಥದ ಪದವನ್ನು ಹಾಡುತ್ತಿದ್ದಳು. ನೇತಾಜಿಯು ಬಾಗಿಲಲ್ಲಿ ನಿಂತು ಭಿಕ್ಷೆಯನ್ನು ಬೇಡಿದನು. ನೇತಾಜಿಯ ಮನೆಯವರು ಕೇವಲ ಬಡವರು. ಅದರಲ್ಲಿ ವಿಜಾಪುರ ಬಾದಶಹನ ನಾಯಕನು ನೇತಾಜಿಯಿಂದ ಹತನಾದ ಬಳಿಕ, ಬಾದಶಹನ ದಂಡಾಳುಗಳು ಅವರ ಮನೆಯನ್ನು ೪-೬ ಸಾರೆ ಲೂಟಿ ಮಾಡಿದ್ದರು. ಹೀಗಿದ್ದರೂ ನೇತಾಜಿಯ ತಾಯಿಯು ಆ ಬೈರಾಗಿಯ ಧ್ವನಿಯನ್ನು ಕೇಳಿದ ಕೂಡಲೆ ಒಂದು ಬೊಗಸೆ ಜೋಳವನ್ನು ತಂದು ಅವನ ಜೋಳಿಗೆಯಲ್ಲಿ ಹಾಕಿದಳು. ಬೈರಾಗಿಯು ಬುದ್ಧಿಪೂರ್ವಕವಾಗಿ ಆ ಮುದುಕೆಯನ್ನು ಕುರಿತು:—"ಅಮ್ಮಾ, ಎದುರಿಗಿರುವ ಈ ದೇವಾಲಯದ ಅರ್ಚಕರು ಯಾರು? ಇಂದಿನ ರಾತ್ರಿ ಈ ದೇಗುಲದ ಕಟ್ಟೆಯ ಮೇಲೆ ನಾನು ಇಳಕೊಳ್ಳಬಹುದಲ್ಲವೆ?" ಎಂದು ಕೇಳಿದನು. ಮುದುಕೆಯು:—"ಇಂದು ಒಂದು ದಿನವೇ ಏಕೆ, ನಿನಗೆ ಬೇಸರ ಬರುವವರೆಗೂ

ನೀನು ಅಲ್ಲಿ ಇರಬಹುದು'' ಎಂದು ನುಡಿದು ಒಳಗೆ ಹೋದಳು. ಬಳಿಕ ನೇತಾಜಿಯು ಆ ದೇಗುಲದ ಕಟ್ಟೆಯ ಮೇಲೆ ತನ್ನ ಕಂಟಲಿಯನ್ನಿಳಿಸಿದನು.

ಹೊತ್ತು ಮುಳುಗಿತು. ನೇತಾಜಿಯ ತಂದೆಯು ಆ ಗುಡಿಯ ಮುಂದೆ ಹಾಯ್ದು ಮನೆಗೆ ಹೋದನು. ಅಲ್ಲಿಯವರಾರೂ ನೇತಾಜಿಯ ಗುರ್ತು ಹಿಡಿಯಲಿಲ್ಲ. ಬರಬರುತ್ತ ಕತ್ತಲೆಯು ಹೆಚ್ಚಿ, ಒಬ್ಬರ ಮೋರೆ ಮತ್ತೊಬ್ಬರಿಗೆ ಕಾಣದಾಯಿತು. ಆಗ ನೇತಾಜಿಯು ಮೆಲ್ಲನೆ ತನ್ನ ಮನೆಗೆ ಹೋಗಿ "ಅವ್ವಾ'' ಎಂದು ಒದರಿದನು. ಮಗನ ದನಿಯಂತೆ ಕೇಳಬರಲು, ನೇತಾಜಿಯ ತಾಯಿಯು ಅವಸರದಿಂದ ಹೊರಗೆ ಬಂದು ಬಾಗಿಲ ತೆರೆದಳು. ಬೈರಾಗಿಯು ಒಳಗೆ ಬಂದನು. ಬೈರಾಗಿಯನ್ನು ನೋಡಿ ಆ ಮುದುಕೆಯು:—"ಅವ್ವಯ್ಯಾ! ಇದೇನು? ಈತನು ಸಂಜೆಯ ಮುಂದೆ ಭಿಕ್ಷೆಗೆ ಬಂದ ಬೈರಾಗಿಯು; ನನ್ನ ಮಗನೇ ಬಂದನೆಂದು ಗಡಬಡಿಸಿ ಬಂದೆನು. ಈತನು ವಿಜಾಪುರದವರ ಗುಪ್ತ ಹೇರನಾಗಿರಲಿಕ್ಕಿಲ್ಲವಷ್ಟೆ?'' ಎಂದು ಅನ್ನುತ್ತ, ಹಿಂದಕ್ಕೆ ಸರಿದಳು. ಆಗ ನೇತಾಜಿಯು ಗದ್ಗದಿತ ಕಂಠದಿಂದ:—"ಅವ್ವಾ, ಅಂಜಬೇಡ; ನಾನು ನಿನ್ನ ಮಗನಾದ ನೇತಾಜಿಯೇ ಇರುವೆನು'' ಎಂದು ನುಡಿದು, ಮೈ ಮೇಲಿನ ವ್ಯಾಘ್ರಚರ್ಮವನ್ನು ಬಿಸುಟಿದನು. ಮುದುಕೆಯು ಅತ್ಯಂತ ಸಂತೋಷದಿಂದ ಮಗನನ್ನು ಅಪ್ಪಿಕೊಂಡಳು. ನೇತಾಜಿಯ ತಂದೆಯೂ ಬಂದು ಮಗನನ್ನು ಅಪ್ಪಿಕೊಂಡು ಆರಂದಬಾಷ್ಪಗಳನ್ನು ದುರಿಸಿದನು. ಅಂದು ಆ ತ್ರಿವರ್ಗರಿಗಾದ ಆನಂದವು ವರ್ಣಿಸಲಸದಳವಾಗಿತ್ತು. ಬಳಿಕ ನೇತಾಜಿಯು ಕಳೆದ ಎರಡು ವರ್ಷಗಳಲ್ಲಿ ಸಂಭವಿಸಿದ ಎಲ್ಲ ಸಂಗತಿಗಳನ್ನು ಹೇಳಿದನು. ಆತನ ತಂದೆಯು ವಿಜಾಪುರದವರು ತಮಗೆ ಹೇಗೆ ಹೇಗೆ ತೊಂದರೆಕೊಟ್ಟರೆಂಬದನ್ನು ಹೇಳಿದನು. ಅದನ್ನು ಕೇಳಿಕೇಳಿದಂತೆ ನೇತಾಜಿಯ ಬಾಹುಗಳು ಸ್ಫುರಣ ಹೊಂದಹತ್ತಿದವು. ಆಗ ಅವನು ತಂದೆಯನ್ನು ಕುರಿತು:—"ಅಪ್ಪಾಜಿಯವರೇ, ಕಾಶಿಯ ತಂದೆಯು ಈಗೆಲ್ಲಿರುವನು?'' ಎಂದು ಕೇಳಿದನು. ಅದಕ್ಕೆ

ತಂದೆಯು ನುಡಿದನೇನಂದರೆ:-“ತಮ್ಮಾ, ನಿನ್ನ ಕಾಶಿಯ ತಂದೆಯಾದ ದತ್ತಾಜಿಯ ಪಾಡೇನು? ಈ ಊರೊಳಗಿನ ಎಲ್ಲ ಪ್ರತಿಷ್ಠಿತರೂ ಊರ ಬಿಟ್ಟು ಹೋದರು. ದತ್ತಾಜಿಯೂ ಕಾಶಿಯೊಡನೆ ರಾಜಮಾಚಿಯ ಕಿಲ್ಲೆಗೆ ಹೋಗಿದ್ದಾನೆ. ರಾಜಮಾಚಿಯ ಕಿಲ್ಲೇದಾರನಾದ ತ್ರ್ಯಂಬಕ ರಾಯನು ಆತನಿಗೆ ತುಂಬಾ ಪರಿಚಯಸ್ಥನಿದ್ದುದರಿಂದ, ಅವನ ಆಶ್ರಯ ಕ್ಕಾಗಿ ದತ್ತಾಜಿಯು ಅಲ್ಲಿಗೆ ಹೋಗಿದ್ದಾನೆ. ಇಷ್ಟು ದಿವಸ ಜನರಲ್ಲಿ “ಧರ್ಮರಕ್ಷಣೆಗಾಗಿ ಶಂಕರನು ಹುಟ್ಟಿ ಬಂದಿರುವನೆ”ಂಬ ದಟ್ಟವಾದ ವಾರ್ತೆಯಿತ್ತು. ಈಗ ಅದು ನಿಜವಾದಂತೆ ತೋರುತ್ತದೆ. ಶಿವನೇರಿ ಕಿಲ್ಲೆಯ ಶಿವಾಜಿಯೇ ಆ ಅವತಾರೀ ಪುರುಷನೆಂದು ಜನರು ಆಡಿ ಕೊಳ್ಳುತ್ತಿರುವರು. ಆ ಶಿವಾಜಿಗೆ ಸಾಕ್ಷಾತ್ ಅಂಬಾಭವಾನಿಯು ಪ್ರಸನ್ನಳಾಗಿರುವಳಂತೆ! ಸಾವಿರಾರು ಮಾವಳೀ ಜನರು ಆತನ ಸಹಾ ಯಕ್ಕಾಗಿ ಧಾವಿಸುತ್ತಿದ್ದಾರೆ. ಆತನಾದರೂ ಸ್ವಪರಾಕ್ರಮದಿಂದ ವಿಜಾ ಪುರದವರಿಂದ ಹತ್ತಿಪ್ಪತ್ತು ಕಿಲ್ಲೆಗಳನ್ನು ಹರಣ ಮಾಡಿ ಯಶಸ್ವಿ ಯಾಗಿರುತ್ತಾನೆ. ರಾಜಮಾಚಿಯ ಕಿಲ್ಲೆಯು ಶಿವಾಜಿಯ ವಶದಲ್ಲಿದ್ದು, ತ್ರ್ಯಂಬಕರಾಯನನ್ನು ಆತನೇ ನೇಮಿಸಿರುತ್ತಾನೆ.”

ತಂದೆಯು ಈ ಮಾತುಗಳನ್ನು ಕೇಳಿ ನೇತಾಜಿಯು ಅತ್ಯಂತ ಉತ್ಸಾಹದಿಂದ:—ಅಪ್ಪಾ, ಹಾಗಾದರೆ ನಾನೂ ಆ ರಾಜಮಾಚಿಯ ಕಿಲ್ಲೆಗೆ ಹೋಗುವೆನು. ಬೆಳಗಾಗುವಷ್ಟರಲ್ಲಿ ನಾನು ಆ ಕಿಲ್ಲೆಯ ಮಾರ್ಗ ವನ್ನು ಹಿಡಿಯಲಿಕ್ಕೆ ಬೇಕು. ಯಾಕಂದರೆ ಬೆಳಗಾದ ಮೇಲೆ ಈ ಊರಲ್ಲಿ ಯಾರಾದರೂ ನನ್ನ ಗುರ್ತು ಹಿಡಿದರೆ, ಕೆಲಸವು ಕೆಟ್ಟು ಹೋಗುವದು. ನನ್ನ ಮೇಲೂ ನಿಮ್ಮ ಮೇಲೂ ಭಯಂಕರ ಸಂಕಟ ವೊದಗುವದು. ಹೀಗೆ ಸಂಕಟದಲ್ಲಿ ಬೀಳಲಿಕ್ಕೆ ನಾವಾಗಿಯೇ ಯತ್ನ ಮಾಡುವದು ತರವಲ್ಲ. ನಿಮ್ಮಿಬ್ಬರ ಭೆಟ್ಟಿಯೊಯಿತು. ಇದೇ ದೊಡ್ಡ ಲಾಭವು. ನಾನು ಬೇಗನೆ ರಾಜಮಾಚಿಗೆ ಹೋಗಿ, ಅಲ್ಲಿಯ ಕಿಲ್ಲೇ ದಾರನ ದಂಡಿನಲ್ಲಿ ಸೇರಿಕೊಳ್ಳುವೆನು. ಒಂದುವೇಳೆ ಕಿಲ್ಲೇದಾರನು ನನಗೆ ಆಶ್ರಯ ಕೊಡದಿದ್ದರೆ, ನೆಟ್ಟಗೆ ಶಿವಾಜಿಯ ಕಡೆಗೇ ಹೋಗು

ವೆನು. ದೇಶಸೇವೆಯಲ್ಲಿ ಕಾಲಕಳೆಯಬೇಕೆಂದೂ, ಅದರಲ್ಲಿಯೇ ನನ್ನ ಕಲ್ಯಾಣವಿರುತ್ತದೆಂದೂ ನನ್ನ ಗುರುಗಳು ಆಜ್ಞೆ ಮಾಡಿರುತ್ತಾರೆ, ಎಂದು ನುಡಿದನು. ಆಗ ನೇತಾಜಿಯ ತಂದೆಯು:—ಅಪ್ಪಾ ಮಗೂ, ನೀನು ಹೇಗೂ ಇಲ್ಲಿ ಇರುವ ಹಾಗಿಲ್ಲ. ಶಿವಾಜಿಯ ದಂಡಿನಲ್ಲಿ ಸೇರಿ ಕೊಳ್ಳುವದು ಸ್ತುತ್ಯವಾಗಿದೆ; ಆದರೆ ನೀನು ಸ್ವಲ್ಪ ಹುಂಬ ಮನುಷ್ಯನು; ಕಠಿಣ ಪ್ರಸಂಗಗಳಲ್ಲಿ ಮುಂದೊರೆದು ಹೋಗುವದು ಬಹಳ. ಏನಾದರೂ ಜೀವದ ಮೇಲೆ ಪ್ರಸಂಗ ತಂದುಕೊಂಡೆಯೆಂದರೆ ನಮ್ಮ ಜೀವ ತಲ್ಲಣಿಸುತ್ತದೆ. ನಮಗೆ ನೀನೇ ಆಧಾರಸ್ತಂಭನಿರುತ್ತೀ; ನಿನ್ನ ಸಲುವಾಗಿಯೇ ನಾವು ಜೀವ ಹಿಡಿದಿರುತ್ತೇವೆ; ಆದ್ದರಿಂದ ಬಹಳ ಜೋಕೆಯಿಂದಿರು. ಮೇಲಿಂದ ಮೇಲೆ ಸುದ್ದಿಯನ್ನು ತಿಳಿಸುತ್ತಿರು, ಎಂದು ನುಡಿದನು. ತಂದೆಯ ಮಾತನ್ನು ಕೇಳಿ ನೇತಾಜಿಗೆ ಪರಮಾನಂದವಾಯಿತು; ಆದರೆ ಆತನ ತಾಯಿಗೆ ಮಾತ್ರ ಪರಮ ವಿಷಾದವೆನಿಸಿತು. ಮಗನ ವಿಯೋಗವು ಪುನಃ ಆಗುವದೆಂಬದನ್ನು ಆ ಮುದುಕೆಯು ಚಿಂತಿಸಿ, ಉಪಾಯವಿಲ್ಲದೆ:—ಅಪ್ಪಾ ಮಗೂ, ಇನ್ನು ನಿನ್ನ ಭೆಟ್ಟಿಯಾಗುವದು ಯಾವಾಗೋ ನಿಯಮವಿಲ್ಲ. ಈಗಲೇ ನನ್ನ ಕೈಮುಟ್ಟಿ ಜುಣಕ-ರೊಟ್ಟಿ ಮಾಡಿಕೊಡುತ್ತೇನೆ ಹೊಟ್ಟೆತುಂಬ ತಿಂದು ಹೋಗು, ಎಂದು ನುಡಿದಳು. ಬಳಿಕ ಆ ಮುದುಕೆಯು ಒಲೆ ಹೊತ್ತಿಸಿ, ಮಗನಿಗಾಗಿ ಆಹಾರವನ್ನು ಸಿದ್ಧಪಡಿಸಿದಳು. ನೇತಾಜಿಯು ತಾಯಿ ಬಡಿಸಿದ ಆಹಾರವನ್ನು ಯಥೇಚ್ಛವಾಗಿ ತಿಂದನು. ಅಷ್ಟರಲ್ಲಿ ಊರೊಳಗಿನ ಕೋಳಿಗಳು ಕೂಗಹತ್ತಲು, ಬೆಳಗು ಹರಿಯ ಬಂತೆಂಬ ಅವಸರದಿಂದ ನೇತಾಜಿಯು ತನ್ನ ಬೈರಾಗೀ ವೇಷವನ್ನು ಧರಿಸಿದನು; ಮತ್ತು ತಾಯಿಯು ಕಟ್ಟಿಕೊಟ್ಟ ರೊಟ್ಟೆಬುತ್ತಿಯನ್ನು ತಕ್ಕೊಂಡು, ತಂದೆ-ತಾಯಿಗಳಿಗಿಬ್ಬರಿಗೂ ಪೊಡಮಟ್ಟು, ಅವರ ಆಶೀರ್ವಾದವನ್ನು ಸಂಪಾದಿಸಿ, ಮನೆ ಬಿಟ್ಟು ಹೊರಬಿದ್ದನು. ಅವನು ಊರ ದಾಟಿ ಧಾವರೀ ನದಿಯನ್ನೂ, ಚೌಕ ಗ್ರಾಮವನ್ನೂ ತಿರುತಿರುಗಿ ನೋಡುತ್ತ, ರಾಜಮಾಚಿಯ ದಾರಿಯನ್ನು ಹಿಡಿದು ಭರದಿಂದ ನಡೆದನು.

---

# ರಾಜಮಾಚಿಯ ದುರ್ಗ

ರಾಜಮಾಚಿಯ ದುರ್ಗವು ಹಲವು ಪರ್ವತಗಳ ಮಧ್ಯದಲ್ಲಿರುತ್ತದೆ. ಆ ಕಿಲ್ಲೆಗೆ ಹೋಗಬೇಕಾದರೆ ಬೋರ ಘಟ್ಟದಲ್ಲಿ ಹಾಯ್ದು, ಮುಂದೆ ಡೊಂಕು ಡೊಂಕಾಗಿರುವ ಮಾರ್ಗವನ್ನು ಕ್ರಮಿಸಬೇಕಾಗುವದು. ನೇತಾಜಿಯು ಈ ಮಾರ್ಗದಲ್ಲಿ ವಿಚಿತ್ರವೇಷದಿಂದ ಸಾಗಿದ್ದನು. ರಾಜಮಾಚಿಯ ದುರ್ಗವು ಇಂಥ ದಿಕ್ಕಿಗೇ ಇರುವದೆಂಬದು ಆತನಿಗೆ ಚೆನ್ನಾಗಿ ಗೊತ್ತಿರದ್ದರಿಂದ, ಅವನು ಎದುರಿಗೆ ಭೆಟ್ಟಿಯಾದ ದಾರಿಕಾರರನ್ನು ವಿಚಾರಿಸುತ್ತಿದ್ದನು. ನೇತಾಜಿಯು ಮನೆಯಿಂದ ಹೊರಡಬೇಕಾದರೆ ಇನ್ನೂ ಬೆಳಕು ಹರಿದಿದ್ದಿಲ್ಲ. ಅವನು ಮಧ್ಯಾಹ್ನದ ವರೆಗೆ ನಡೆಯಲು, ಒಂದು ಸಣ್ಣ ಹಳ್ಳವು ಹತ್ತಿತು. ಅಲ್ಲಿ ಗಿಡಗಳ ಗುಂಪು ವಿಶೇಷವಾಗಿದ್ದುದರಿಂದ, ನೆರಳು ದಟ್ಟವಾಗಿ ಬಿದ್ದಿತ್ತು. ಆದ್ದರಿಂದ ನೇತಾಜಿಯು ಬಿಸಿಲನ್ನಿಳಿಸಿಕೊಂಡು ಮುಂದೆ ಹೋಗಬೇಕೆಂದು ಹಳ್ಳದಲ್ಲಿ ಕೈ-ಕಾಲು-ಮೋರೆ ತೊಳೆದುಕೊಂಡು, ಒಂದು ಗಿಡದ ಬುಡ ತನ್ನ ಕಂಟಲಿಯನ್ನಿಳಿಸಿದನು; ಮತ್ತು ತಾಯಿಯು ಕೊಟ್ಟ ರೊಟ್ಟೀಗಂಟನ್ನು ಬಿಚ್ಚಿದನು. ಹೊಟ್ಟೆಯು ಹಸಿದದ್ದರಿಂದ, ಆ ಹಿಂಡೀ ರೊಟ್ಟಿಯು ಅವನಿಗೆ ಬಲು ರುಚಿ ಹತ್ತಿತು. ಬಳಿಕ ಅವನು ಸ್ವಲ್ಪ ಬುತ್ತೀ ತಿಂದು, ಹಳ್ಳದಲ್ಲಿ ನೀರು ಕುಡಿದು, ಕೆಲಹೊತ್ತು ವಿಶ್ರಮಿಸಿದನು. ಮುಂದೆ ಕೆಲ ಹೊತ್ತಿನ ಮೇಲೆ ಅಲ್ಲಿಗೆ ಇಬ್ಬರು ಒಕ್ಕಲಿಗರು ಬಂದರು. ಅವರೂ ಹಳ್ಳದಲ್ಲಿ ನೀರು ಕುಡಿದು, ಗಿಡಗಳ ನೆರಳಿಗೆ ಕುಳಿತರು; ಮತ್ತು ಬೊಕ್ಕಣದೊಳಗಿನ ಚಿಲಿಮೆಯನ್ನು ತೆಗೆದು, ಅದಕ್ಕೆ ತಂಬಾಕ ಹಾಕಿ, ಸಜ್ಜು ಮಾಡಿದರು. ಅಷ್ಟರಲ್ಲಿ ಅವರಿಗೆ ಸಮೀಪದ ಒಂದು ಗಿಡದ ಬುಡಕ್ಕೆ ಒಬ್ಬ ಬೈರಾಗಿಯು ಕುಳಿತುಕೊಂಡಿರುವನೆಂಬದು ಕಂಡು ಬರಲು, ಅವರು ಅವನಲ್ಲಿಗೆ ಹೋಗಿ, ಚಿಲಿಮೆಯನ್ನು ಅವನ ಕೈಯಲ್ಲಿ ಕೊಟ್ಟು, ಭಕ್ತಿಯಿಂದ ನಮಸ್ಕರಿಸಿದರು. ನೇತಾಜಿಯು ಒಳ್ಳೇ ಆದರದಿಂದ ಆ ಚಿಲಿಮೆಯನ್ನು ಸ್ವೀಕರಿಸಿ, ಒಂದೆ

ರಡು ಜುರಿಕೆ ಸೇದಿ, ಅದನ್ನು ಆ ಒಕ್ಕಲಿಗರಿಗೆ ತಿರುಗಿ ಕೊಟ್ಟನು. ಹೀಗೆ ಚಿಲಿಮೆಯ ನಿಮಿತ್ಯದಿಂದ ನೇತಾಜಿಗೂ ಆ ಒಕ್ಕಲಿಗರಿಗೂ ಪ್ರಥಮ ಪರಿಚಯವುಂಟಾಯಿತು. ಬಳಿಕ ಅವರು ಆ ಮಾತು ಈ ಮಾತು ಆಡುತ್ತ ಕುಳಿತರು. ಆಗ ಆ ಒಕ್ಕಲಿಗರು ಬೈರಾಗಿಯನ್ನು ಕುರಿತು: "ನೀವು ಎಲ್ಲಿಂದ ಬಂದಿರಿ, ಎಲ್ಲಿಗೆ ಹೋಗುತ್ತೀರಿ?" ಎಂಬ ಪ್ರಶ್ನೆ ಗಳನ್ನು ಮಾಡಿದರು. ಬೈರಾಗಿಯು:--"ಕಾಶಿಯಿಂದ ಬಂದೆನು; ರಾಮೇಶ್ವರಕ್ಕೆ ಹೋಗುತ್ತೇನೆ" ಎಂದು ಉತ್ತರ ಕೊಟ್ಟು:—"ರಾಜ ಮಾಚಿಯು ಇಲ್ಲಿಂದ ಎಷ್ಟು ದೂರವಿರುವದು?" ಎಂದು ಕೇಳಿದನು. ಅದಕ್ಕೆ ಆ ಒಕ್ಕಲಿಗರು ರಾಜಮಾಚಿಯ ಕಿಲ್ಲೆಯು ಇಲ್ಲಿಯೇ ಸಮೀಪ ದಲ್ಲಿ ಇರುವದೆಂದು ಹೇಳಿ:—"ಮಹಾರಾಜ, ಈಗ ನೀವು ಆ ದುರ್ಗಕ್ಕೆ ಹೋಗಬೇಡಿರಿ; ಯಾಕಂದರೆ, ಇನ್ನು ೩-೪ ದಿನಗಳಲ್ಲಿಯೇ ವಿಜಾಪುರದ ಬಾದಶಹನ ದಂಡು ಬರತಕ್ಕದ್ದಿರುವದು. ರಾಜಮಾಚಿಯ ದುರ್ಗವು ಈಗ ಶಿವಾಜಿಯ ವಶದಲ್ಲಿರುತ್ತದೆ. ಆದ್ದರಿಂದ ಬಾದಶಹನು ಅದನ್ನು ತಕ್ಕೊಳ್ಳುವದಕ್ಕೆ ದಂಡು ಕಳುಹಿಸಿರುವನು. ಅಲ್ಲಿಗೆ ಹೋ-ದರೆ, ನೀವಾಗಿ ಇಂಥ ಗೊಂದಲದಲ್ಲಿ ಸಿಗುತ್ತೀರಿ?"

ಒಕ್ಕಲಿಗರ ಮಾತು ಕೇಳಿ ನೇತಾಜಿಯು:--"ಬಾದಶಹನ ದಂಡು ಬಂದರೆ ಅದರ ಸಮಾಚಾರ ತಕ್ಕೊಳ್ಳಲಿಕ್ಕೆ ಶಿವಾಜಿಯ ದಂಡು ರಾಜಮಾಚಿಯಲ್ಲಿಲ್ಲವೇನು?" ಎಂದಂದನು.

ಅದಕ್ಕೆ ಒಕ್ಕಲಿಗರು:—"ಮಹಾರಾಜ, ಎಲ್ಲಿಯ ಶಿವಾಜಿಯ ದಂಡು! ಎಲ್ಲಿಯ ಬಾದಶಹನ ದಂಡು! ಶಿವಾಜಿಗೆ ಜನ ಸಹಾಯವಿಲ್ಲ. ಇದ್ದಷ್ಟು ಜನರಿಗೆ ಶಸ್ತ್ರಗಳಿಲ್ಲ. ಇಂಥವನು ಬಾದಶಹನ ಮುಂದೆ ಹೇಗೆ ತಡೆಯುವನು? ಜನರೇನೋ ಶಿವಾಜಿಯು ಶಂಕರನೆಂದು ಈಗ ಅನ್ನುತ್ತಾರೆ. ಮುಂದೆ ಏನಾಗುವದೋ ನೋಡಬೇಕು!"

ನೇತಾಜಿ:—ಶಿವಾಜಿಗೆ ಜನಸಹಾಯವಿಲ್ಲದಿದ್ದರೆ ನಿಮ್ಮಂಥ ಹೊಸ ಹುರುಪಿನ ತರುಣರು ಅವನಿಗೆ ಯಾಕೆ ಸಹಾಯ ಮಾಡಬಾರದು? ನಿಮ್ಮಂಥವರು ಲಗುಬಗನೆ ಆತನ ಸೈನ್ಯದಲ್ಲಿ ಸೇರಿದರೆ, ವಿಜಾಪುರದವರ

ದಂಡು ಅವನನ್ನೇನು ಮಾಡೀತು? ಆದರಂತೆ ಮಹಾರಾಷ್ಟ್ರದವರು ಅವನಿಗೆ ಹಣವನ್ನು ಒದಗಿಸಿ ಕೊಟ್ಟರೆ, ಬೇಕಾದಷ್ಟು ಶಸ್ತ್ರಾಸ್ತ್ರಗಳೂ ಸಿದ್ಧವಾಗುವವಲ್ಲವೇ? ಶಿವಾಜಿಯು ನಿಮ್ಮೆಲ್ಲರನ್ನು ಮುಸಲ್ಮಾನರ ಬಾಧೆಯಿಂದ ಸಂರಕ್ಷಿಸುವದಕ್ಕೆ ಹೆಣಗುತ್ತಿರುವನಲ್ಲವೇ? ಹೀಗಿದ್ದು, ನೀವು ಅವನಿಗೆ ಸಹಾಯ ಮಾಡದೆ, ದೂರ ನಿಂತು ಮೋಜು ನೋಡಿದರೆ, ದೇವರು ನಿಮಗೆ ಖಂಡಿತವಾಗಿಯೂ ದಂಡನೆ ಮಾಡುವನು.

ನೇತಾಜಿಯ ಈ ಸರಳ ಮಾತುಗಳನ್ನು ಕೇಳಿ, ಆ ಒಕ್ಕಲಿಗರ ಮನಸ್ಸು ತಿರುಗಿತು. ಶಿವಾಜಿಯ ದಂಡಿನಲ್ಲಿ ತಾವೂ ಸೇರಿಕೊಳ್ಳಬೇಕೆಂಬ ಬುದ್ಧಿಯು ಅವರಿಗೆ ಹುಟ್ಟಿತು. ಕೂಡಲೆ ಅವರು ಬೈರಾಗಿಯನ್ನು ನಮಸ್ಕರಿಸಿ, ತಾವು ಶಿವಾಜಿಯನ್ನು ಕೂಡಿಕೊಳ್ಳುವೆವೆಂದು ವಚನ ಕೊಟ್ಟು, ತಮ್ಮ ಕೆಲಸಕ್ಕೆ ಹೊರಟು ಹೋದರು. ಇತ್ತ ನೇತಾಜಿಯು ನಡೆದ ಪ್ರಕಾರವನ್ನು ಯೋಚಿಸುತ್ತ ಕುಳಿತುಕೊಂಡನು. ಇನ್ನೊಂದು ಕ್ಷಣದಲ್ಲಿ ಅವನು ಅಲ್ಲಿಂದ ಹೊರಡತಕ್ಕವನು; ಅಷ್ಟರಲ್ಲಿ ಕುದುರೆಗಳ ಖುರಪುಟಗಳ ಸಪ್ಪಳ ಕೇಳಬರತೊಡಗಿತು. ನೇತಾಜಿಯು ಆ ಸಪ್ಪಳ ಕೇಳಬರುವ ದಿಕ್ಕಿನ ಕಡೆಗೆ ನೋಡಲು, ಇಬ್ಬರು ಸ್ವಾರರು ಧಾವಿಸಿ ಬರುತ್ತಿರುವದು ಕಂಡಿತು. ಕೂಡಲೆ ನೇತಾಜಿಯು ತನ್ನ ಬೈರಾಗಿಯ ವೇಷವನ್ನು ಚನ್ನಾಗಿ ಸರಿಪಡಿಸಿಕೊಂಡು, ಜೋಳಿಗೆಯೊಳಗಿನ ಚಿಲಿಮೆಯನ್ನು ತೆಗೆದು ಸೇದುತ್ತ ಕುಳಿತುಕೊಂಡನು. ನೋಡ ನೋಡುವಷ್ಟರಲ್ಲಿ ಆ ಕುದುರೆಯ ಸ್ವಾರರು ನೆಟ್ಟಗೆ ಆ ಹಳ್ಳದ ದಂಡೆಗೇ ಬಂದರು. ಅವರಲ್ಲಿ ಒಬ್ಬನು ಸರದಾರೀ ರೀತಿಯ ಪೋಷಾಕನ್ನು ಧರಿಸಿದ್ದು, ಜಾತಿಯಿಂದ ಮುಸಲ್ಮಾನನಾಗಿದ್ದನು. ಇನ್ನೊಬ್ಬನು ಸಾದಾ ಪೋಷಾಕನ್ನು ಧರಿಸಿದ ಹಿಂದುವಿದ್ದನು. ಆದ್ದರಿಂದ ಮುಸಲ್ಮಾನನು ಸರದಾರನಿದ್ದು, ಹಿಂದುವು ಅವನ ಸೇವಕನಿರಬಹುದೆಂದು ನೇತಾಜಿಯು ಕುಳಿತಲ್ಲಿಯೇ ತರ್ಕಿಸಿದನು. ವಸ್ತುತಃ ಅವನ ಆ ತರ್ಕವು ನಿಜವಾಗಿಯೇ ಇತ್ತು.

ಆ ಸ್ವಾರರಿಬ್ಬರೂ ಇಳಿದು, ಹಳ್ಳದಲ್ಲಿ ನೀರು ಕುಡಿದು, ಕುದುರೆಗಳಿಗೂ ಕುಡಿಸಿ, ಮೇಲೆ ಗಿಡದ ನೆರಳಿಗೆ ಬಂದರು. ಹಿಂದುವು ಒಂದು

ಪ್ರಶಸ್ಥವಾದ ಸ್ಥಳದಲ್ಲಿ ಒಂದು ಗಾಸೆಯನ್ನು ಹಾಸಲು, ಅದರ ಮೇಲೆ ಆ ಮುಸಲ್ಮಾನ ಸರದಾರನು ಕುಳಿತುಕೊಂಡನು; ಹಿಂದುವು ಅವನೆದುರಿಗೆ ನಿಂತುಕೊಂಡನು. ಬೈರಾಗಿಯು ಒಂದು ಗಿಡದ ಮರೆಗೆ ಕುಳಿತದ್ದರಿಂದ ಅವನನ್ನು ಅವರು ನೋಡಿರಲಿಲ್ಲ. ಕೆಲಹೊತ್ತಿನ ಮೇಲೆ ಆ ಸರದಾರನು ಒಳ್ಳೇ ಒಗರಿನಿಂದ:—ರಾಮುಜೀ, ಶಿವಾಜಿಯು ದಡ್ಡನು; ಅಂತೇ ಅವನು ಬಾದಶಹನ ವೈರತ್ವವನ್ನು ಸಂಪಾದಿಸಿದನು. ಹತ್ತಿಪ್ಪತ್ತು ಕಿಲ್ಲೆಗಳನ್ನು ಹಿಡಿದುಕೊಂಡರೆ, ಅವನು ಅದಾವ ದೊಡ್ಡ ಕೆಲಸ ಮಾಡಿದಂತಾಯಿತು? ಈ ಕಿಲ್ಲೆಗಳನ್ನು ಹಾ ಹಾ ಅನ್ನುವಷ್ಟರಲ್ಲಿ ಕಸಗೊಂಡು ಆತನ ಪಾರುಪತ್ಯ ಮಾಡುವೆವು. ಈ ರಾಜಮಾಚಿಯ ಕಿಲ್ಲೆಯನ್ನು ಆಡಾಡುತ್ತ ತಕ್ಕೊಳ್ಳುವೆವು. ಒಂದು ತೋಫು ಹಚ್ಚಿದರೆ ಸಾಕು; ಕಿಲ್ಲೆಯು ಕೈವಶವಾಯಿತೆಂದೇ ತಿಳಿ, ಎಂದನು.

ಈ ಮುಸಲ್ಮಾನ ಸರದಾರನ ಹೆಸರು ಆಯೂಬಖಾನ ಎಂದಿತ್ತು. ಅವನು ಬಾಷ್ಕಳಪಂತನಂತೆ ಬರೀ ಬಾಯ ಮಾತಾಡುತ್ತಿದ್ದನೇ ಹೊರತು, ಕರ್ತೃತ್ವಶಕ್ತಿಯು ಆತನಲ್ಲಿ ತಿಲಮಾತ್ರವಾದರೂ ಇದ್ದಿಲ್ಲ; ಆದರೂ ಇಂಥ ಮನುಷ್ಯನ ಸಂಗಡ ಹೇಗೆ ನಡಕೊಳ್ಳಬೇಕೆಂಬದು ಹೊಟ್ಟೆಯ ದಾಸನಾದ ರಾಮುಜಿಗೆ ಚೆನ್ನಾಗಿ ಅವಗತವಿತ್ತು. ಆಗ ಆತನು ತಲೆದೂಗುತ್ತ:—"ಹುಜೂರ, ತಮ್ಮ ತೋಫಿನ ಮುಂದೆ ರಾಜಮಾಚಿ ಕಿಲ್ಲೆಯ ಪಾಡೇನು? ಆದರೆ ಹುಜೂರ, ಹೀಗೆ ಗುಪ್ತರೀತಿಯಿಂದ ಆ ಕಿಲ್ಲೆಯನ್ನು ನೋಡುವ ಕಾರಣವೇನು? ಒಮ್ಮೆಲೆ ತೋಫು ಹಚ್ಚಿಬಿಟ್ಟರೆ ಸಹಜವಾಗಿ ಕೆಲಸವಾಗುವದಲ್ಲವೆ?" ಎಂದನು. ಅದಕ್ಕೆ ಆ ಖಾನನು ನುಡಿದನೇನಂದರೆ:—ರಾಮುಜೀ, ನಿನಗೆ ಇದೆಲ್ಲ ತಿಳಿಯುವದಿಲ್ಲ. ಕಿಲ್ಲೆಯನ್ನು ನೋಡುವದರಲ್ಲಿ ಹಲವು ಉದ್ದೇಶಗಳಿರುತ್ತವೆ. ಕಿಲ್ಲೆಯ ಭದ್ರತೆಯು ಎಲ್ಲಿ ಕಡಿಮೆಯಿದೆ? ಎಲ್ಲಿ ಕೊಳ್ಳೆಯನ್ನಿಟ್ಟರೆ ಕಿಲ್ಲೆಯು ಕೈವಶವಾಗುವದು? ಯಾವ ದಾರಿಯಿಂದ ಹೋಗುವದು ಹಿತಕರವಿರುವದು? ಇವೆಲ್ಲ ಸಂಗತಿಗಳನ್ನು ನೋಡಬೇಕಾಗಿದೆ. ನಿನಗೆ ಈ ಕಿಲ್ಲೆಯು ಚೆನ್ನಾಗಿ ಅವಗತವಾಗಿದೆಯಲ್ಲವೆ?

ರಾಮುಜಿಯು ಆಯೂಬಖಾನನಿಗೆ ಒಳ್ಳೇ ವಿನಯದಿಂದ:-ಹುಜೂರ, ನನ್ನ ಬಾಲ್ಯವು ಈ ಭಾಗದಲ್ಲಿಯೇ ಕಳೆದಿರುತ್ತದೆ. ರಾಜಮಾಚಿಯ ಕಿಲ್ಲೆಯನ್ನು ನಾನು ಹಲವು ಸಾರೆ ನೋಡಿರುತ್ತೇನೆ; ಅದರ ಸಂಪೂರ್ಣ ತಿಳುವಳಿಕೆಯು ನನಗಿರುತ್ತದೆ. ಇತ್ತೀಚೆಗೆ ಶಿವಾಜಿಯು ಅಲ್ಪಸ್ವಲ್ಪ ಹೆಚ್ಚು ಕಟ್ಟಿಸಿಕೊಂಡಿರಬಹುದು; ಆದರೆ ಅಷ್ಟರಿಂದ ಕಿಲ್ಲೆಯು ಅಭೇದ್ಯವಾಗಿರುವದೆಂದು ನಾನು ತಿಳಿಯುವದಿಲ್ಲ. ಕಿಲ್ಲೆಯ ಮೂರೂ ಭಾಗಗಳಲ್ಲಿ ಗುಡ್ಡಗಳ ಸ್ವಾಭಾವಿಕ ಕಟವಾಡಿಯು ಇದ್ದು, ದಕ್ಷಿಣ ಭಾಗದಲ್ಲಿ ಮಾತ್ರ ಕೃತ್ರಿಮ ಗೋಡೆಯನ್ನೇರಿಸಿರುತ್ತಾರೆ. ಆ ಗೋಡೆಯು ತೋಫಿನಿಂದ ಕೆಡವಲಿಕ್ಕೆ ಶಕ್ಯವಿರುತ್ತದೆ. ಒಮ್ಮೆ ಗೋಡೆಯು ಕಡಕೊಂಡು ಬಿದ್ದಿತೆಂದರೆ, ನಮ್ಮ ಕೆಲಸವಾಯಿತು. ನಮ್ಮ ದಂಡು ಕಿಲ್ಲೆಯೊಳಗೆ ಸೇರಲಿಕ್ಕೆ ಬರುತ್ತದೆ, ಎಂದು ನುಡಿದನು. ರಾಮುಜಿಯು ಹೇಳಿದ ಈ ಸಂಗತಿಯಿಂದ ಖಾನನಿಗೆ ತುಂಬಾ ಸಂತೋಷವಾಯಿತು. ಅವನು ರಾಮುಜಿಯ ಬೆನ್ನು ಚಪ್ಪರಿಸಿ:--ಶಾಬಾಸ್! ರಾಮುಜೀ, ನಿನಗೆ ಈ ಕಿಲ್ಲೆಯ ಬಗ್ಗೆ ಚೆನ್ನಾಗಿ ಮಾಹಿತಿಯಿರುತ್ತದೆ. ನಿನ್ನನ್ನು ಕರೆದುಕೊಂಡು ಬಂದದ್ದು ನೆಟ್ಟಗಾಯಿತು; ಆದರೆ ರಾಮುಜೀ, ಕಿಲ್ಲೆಯು ಇನ್ನೆಷ್ಟು ದೂರವಿರುವದು? ಎನ್ನಲು, ಸರದಾರನು ತನ್ನ ಬೆನ್ನು ಚಪ್ಪರಿಸಿದ್ದಕ್ಕೆ ಉಬ್ಬಿ, ರಾಮುಜಿಯು:—ಹುಜೂರ, ಕಿಲ್ಲೆಯು ಇನ್ನೇನೂ ಬಹಳ ದೂರವಿಲ್ಲ. ಎರಡು-ಎರಡೂವರಿ ಮೈಲಾಗಬಹುದು; ಆದರೆ ನಾವು ಈಗಲೆ ಅಲ್ಲಿಗೆ ಹೋದರೆ, ಯಾರಾದರೂ ನಮ್ಮನ್ನು ನೋಡಿ, ನಮಗೆ ತೊಂದರೆಯನ್ನುಂಟು ಮಾಡಬಹುದು; ಅದ್ದರಿಂದ ಕತ್ತಲೆಯಾದ ಬಳಿಕ ನಾವು ಅಲ್ಲಿಗೆ ಹೋಗೋಣ,ಎಂದನು. ರಾಮುಜಿಯ ಈ ಮಾತುಗಳನ್ನು ಕೇಳಿ, ಆಯೂಬಖಾನನು ಒಳ್ಳೇ ಒಗರಿನಿಂದ ನುಡಿದನೇನುಂದರೆ:—"ರಾಮಜೀ, ನೀನು ಮುಸಲ್ಮಾನರ ದಂಡಿನಲ್ಲಿ ಇಷ್ಟು ದಿವಸ ನೌಕರಿಯನ್ನು ಮಾಡಿದರೂ ನಿನಗೆ ಅಂಜಿಕೆಯೇ ತಪ್ಪಲಿಲ್ಲ. ಶತ್ರುಗಳಿಗೆ ಸ್ವಲ್ಪಾದರೂ ಅಂಜಕೂಡದು. ಅವರೆದುರಿಗೆ ಸಡ್ಡು ಹೊಡೆದು ನಿಲ್ಲಬೇಕು"

ಆಯೂಬಖಾನನ ಬಾಯಿಂದ ಇಷ್ಟು ಶಬ್ದಗಳು ಹೊರಡು ವಷ್ಟರಲ್ಲಿ ಆತನ ಹಿಂದಿನಿಂದ ವಜ್ರಗಂಭೀರ ಸ್ವರದಲ್ಲಿ:—“ಹಾಗಾದರೆ ಎಲೈ ವೀರನೇ, ಏಳು-ಏಳು; ಯುದ್ಧಕ್ಕೆ ಸನ್ನದ್ಧನಾಗು; ನಿನ್ನ ಖಡ್ಗವನ್ನು ಒರೆಯಿಂದ ಹಿರಿ. ಮರಾಟವೀರರು ಶತ್ರುಗಳೆದುರಿಗೆ ಹೇಗೆ ಸಡ್ಡು ಹೊಡೆದು ನಿಲ್ಲುವರೆಂಬದನ್ನು ತೋರಿಸುತ್ತೇನೆ.” ಎಂದು ಯಾರೋ ನುಡಿದಂತಾಯಿತು. ಆಯೂಬಖಾನನು ಮೆಟ್ಟಿಬಿದ್ದು ಹಿಂದಿರುಗಿ ನೋಡಿದನು. ಮೈ ತುಂಬ ಹುಲೀಚರ್ಮವನ್ನು ಹೊತ್ತುಕೊಂಡಿದ್ದ ಒಬ್ಬ ಬೈರಾಗಿಯು ತನ್ನ ಕಡೆಗೆ ಬರುತ್ತಿದ್ದನು. ಅವನು ಅತ್ಯಂತ ಕ್ರುದ್ಧನಾಗಿದ್ದನು. ಅವನ ಸರ್ವಾಂಗದಲ್ಲಿ ಭಸ್ಮವು ಚರ್ಚಿಸಲ್ಪಟ್ಟಿತ್ತು. ನೊಸಲಲ್ಲಿ ಕುಂಕುಮವನ್ನು ಹಚ್ಚಿದ್ದನು. ಅವನ ಕಾಲಲ್ಲಿ ಆವುಗೆಗಳಿದ್ದು, ಕೈಯಲ್ಲಿ ಖಡ್ಗವನ್ನು ಧರಿಸಿದ್ದನು. ಆತನ ಶರೀರವು ಗಟ್ಟಿಮುಟ್ಟೆಯಾಗಿದ್ದು, ವೀರಪುರುಷನಂತೆ ತೋರುತ್ತಿದ್ದನು. ಹೀಗಿರುವ ಬೈರಾಗಿಯನ್ನು ಕಂಡ ಕೂಡಲೆ ಖಾನನ ಕೈ ಕಾಲುಗಳ ನಾಡಿಗಳು ತಮ್ಮಷ್ಟಕ್ಕೆ ತಾವೇ ಮಂದಗತಿಯನ್ನು ಹೊಂದಿದವು. ಮೈಯು ಬೆವರ ಹತ್ತಿತು; ಮೋರೆಯೊಣಗಿತು. ವಿಜಾಪುರದವರ ದಂಡಿನಲ್ಲಿ ಇವನು ದೊಡ್ಡ ಸರದಾರನೆಂದೆನಿಸಿಕೊಂಡಿದ್ದರೂ, ಶೂರತನವು ಇವನಲ್ಲಿದ್ದಿಲ್ಲ. ಹಿಂದೆ ನಿಂತು ಯುದ್ಧದೊಳಗಿನ ಪೇಚುಪ್ರಸಂಗಗಳನ್ನು ತಪ್ಪಿಸಿಕೊಳ್ಳುವದರಲ್ಲಿ ಈತನು ಜಾಣನಿದ್ದನು. ಇದೇ ಗುಣದಿಂದಲೇ ಇವನು ಪ್ರಸಿದ್ಧಿಯನ್ನು ಪಡೆದಿದ್ದನು; ಆದರೆ ಇವನ ಹುಳುಕು ಹೊರಬೀಳುವ ಹೊತ್ತು ಈ ದಿನ ಬಂದಿತು. ಇವನು ಬಂದದ್ದು ರಾಜಮಾಚಿಯ ಕಿಲ್ಲೆಯನ್ನು ನೋಡುವದಕ್ಕೆಂದು! ಆದರೆ ನಮಾಜು ಮಾಡುವಷ್ಟರಲ್ಲಿ ಮಸೂತಿಯೇ ಕೊರಳಿಗೆ ಬಿದ್ದಂತೆ, ಭಯಂಕರನಾದ ಬೈರಾಗಿಯೊಡನೆ ಯುದ್ಧಮಾಡುವ ಪ್ರಸಂಗವು ಅವನಿಗೆ ಪ್ರಾಪ್ತವಾಯಿತು.

ರಾಮಜಿಯು ಎಷ್ಟು ಮಾಡಿದರೂ ಹಿಂದುವಾದ್ದರಿಂದ, ಬೈರಾಗಿಯನ್ನು ನೋಡಿ ಅವನಿಗೆ ಭಯಭಕ್ತಿಯುಂಟಾಯಿತು. ಆದ್ದರಿಂದ

ಅವನು ಸುಮ್ಮನೆ ನಿಂತುಕೊಂಡನು; ಆದರೆ ಆಯೂಬಖಾನನು ಹೀಗೆ ಅಂಜಿಕೊಂಡರೆ ಕೆಲಸ ಕೆಡುವದೆಂದು ಯೋಚಿಸಿ, ಬಲುವೆಯಿಂದ ಧೈರ್ಯವನ್ನು ತಂದುಕೊಂಡು, ನುಡಿದನೇನಂದರೆ:—"ಎಲೋ, ಕಾಫರ, ನಿನ್ನ ಜನ್ಮವು ನಿನಗೆ ಬೇಡಾದಂತೆ ತೋರುತ್ತದೆ. ಅಂತೆಯೇ ನೀನು ಮರಣಕ್ಕೆ ಆಮಂತ್ರಣವನ್ನು ಕೊಡಲಿಕ್ಕೆ ಸಿದ್ಧನಾಗಿರುತ್ತೀ. ಮೂರ್ಖಾ, ಓಡು-ಓಡು; ನನ್ನ ಖಡ್ಗಕ್ಕೆ ಆಹುತಿಯಾಗಬೇಡ."

ಆಯೂಬಖಾನನ ಈ ಮಾತುಗಳನ್ನು ಕೇಳಿ ನಕ್ಕು ಗಂಭೀರ ಧ್ವನಿಯಿಂದ:—"ನಾನು ಮೂರ್ಖನೋ, ನೀನು ಮೂರ್ಖನೋ ಎಂಬದು ಈಗ ತಾನೇ ಗೊತ್ತಾಗುವದು. ಓಡಿ ಹೋಗುವದರ ಬದಲು, ನಿನ್ನ ಮೇಲೇರಿ ಬರುತ್ತೇನೆ. ನನ್ನ ಖಡ್ಗವು ನಿನ್ನಂಥ ಖಾನನ ಪ್ರಾಣ ಹರಣ ಮಾಡಲಿಕ್ಕೆ ಹೇಗೆ ಸಮರ್ಥವಾಗಿರುವದೆಂಬದನ್ನು ತೋರಿಸು ತ್ತೇನೆ." ಎಂದು ನುಡಿದು, ನೇತಾಜಿಯು ಒಮ್ಮೆಲೆ ಹುಲಿಯಂತೆ ಹಾರಿ, ಖಾನನ ಮುಂದೆ ಹೋಗಿ ನಿಂತನು. ಪ್ರಸಂಗವು ಮೈಮೇಲೆ ಬಂದದ್ದರಿಂದ ಖಾನನು ತೀರ ಗಾಬರಿಯಾದನು. ಅವನು ನಿರ್ವಾಹ ವಿಲ್ಲದೆ ಖಡ್ಗವನ್ನು ಮೇಲಕ್ಕೆತ್ತಲು, ಯುದ್ಧದೊಳಗಿನ ಪೇಚುಗಳನ್ನು ಬಲ್ಲವನಾದ ನೇತಾಜಿಯು ತನ್ನ ಖಡ್ಗವನ್ನೆತ್ತಿ ಅವನ ಮೊಣಕಾಲಿನ ಕೆಳಭಾಗಕ್ಕೆ ಹೊಡೆದನು. ಪೆಟ್ಟು ಬಲವಾಗಿ ಹತ್ತಿದ್ದರಿಂದ, ಖಾನನು ಒಮ್ಮೆಲೆ ಕುಸಿಕುಳಿತನು. ಬಳಿಕ ನೇತಾಜಿಯು ಖಡ್ಗವಿರುವ ಖಾನನ ಕೈಯನ್ನು ಹಿಡಿದು, ಅವನನ್ನು ಕೆಡವಿ, ಆತನ ಎದೆಯ ಮೇಲೆ ಕುಳಿ ತನು. ನೇತಾಜಿಯ ತೊಡೆಗಳ ತಿಕ್ಕಾಟದಿಂದ ಖಾನನು ಸಂಕಟ ಪಡುತ್ತ ರಾಮಜಿಯನ್ನು ಕುರಿತು:—"ಏ ರಾಮಜೀ, ಏನು ನೋಡು ತ್ತೀ? ಶತ್ರುವಿನ ತಲೆಯನ್ನು ಹರಿಗಡಿ!" ಎಂದು ತಡವರಿಸುತ್ತಲೆ ನುಡಿ ದನು. ರಾಮಜಿಯು ಗಾಬರಿಯಾಗಿ ನಿಂತುಕೊಂಡಿದ್ದನು. ನೇತಾ ಜಿಯು ಅವನ್ನು ಕುರಿತು:—"ರಾಮಜೀ, ನಿನ್ನಲ್ಲಿ ಹಿಂದೂ ರಕ್ತವಿದ್ದರೆ ನನಗೆ ಸಹಾಯ ಮಾಡು; ಮುಸಲ್ಮಾನೀ ರಕ್ತವಿದ್ದರೆ ಖಾನನಿಗೆ ಸಹಾಯ ಮಾಡು" ಎಂದು ಮೇಲಿಂದ ಮೇಲೆ ನುಡಿಯುತ್ತಿದ್ದನು.

ರಾಮಜಿಯು ತನಗೆ ಏನೂ ಸಹಾಯ ಮಾಡದೆ ಇದ್ದುದನ್ನು ನೋಡಿ, ಖಾನನು ಅವನ ಮೇಲೆ ಸಿಟ್ಟುಬೆಂಕಿಯಾದನು; ಆದರೆ ಮಾಡುತ್ತಾನೇನು? ತಾನು ಮೊದಲು ನೇತಾಜಿಯ ಕೈಯೊಳಗಿಂದ ಪಾರಾದರೆ ಸಾಕಾಗಿತ್ತು. ನೇತಾಜಿಯು ಖಾನನನ್ನು ತಿಕ್ಕಿ ತಿಕ್ಕಿ ಹಣ್ಣು ಮಾಡಿ, ನುಡಿದನೇನಂದರೆ:—"ಎಲೈ ರಣಹೇಡಿಯೇ, ನಿನ್ನನ್ನು ಹೀಗೆ ಕೊಲ್ಲುವದು ನನ್ನಂಥವನಿಗೆ ಶೋಭಿಸುವದಿಲ್ಲ. ಏಳು ಮೇಲಕ್ಕೆ; ಖಡ್ಗವನ್ನು ತಕ್ಕೊಂಡು ನನ್ನೊಡನೆ ಯುದ್ಧ ಮಾಡು; ಹಾಗು ಜಯವನ್ನು ಸಂಪಾದಿಸು. ನಿನ್ನಿಂದ ಜಯ ಸಂಪಾದಿಸುವದಕ್ಕೆ ಆಗದಿದ್ದರೆ ನಾನು ಸಂಪಾದಿಸುತ್ತೇನೆ."

ಈ ಮೇರೆಗೆ ನುಡಿದು, ನೇತಾಜಿಯು ಖಾನನನ್ನು ಬಿಟ್ಟು ಮೇಲಕ್ಕೆದ್ದನು. ಎದೆಯ ಮೇಲಿನ ಭಾರವು ಕಡಿಮೆಯಾಗಲು, ಖಾನನು ಸಾವರಿಸಿಕೊಂಡೆದ್ದು, ತನ್ನ ಕುದುರೆಯ ಕಡೆಗೆ ಓಡಿದನು. ಇನ್ನು ಅವನು ಕುದುರೆಯನ್ನೇರಿ ಓಡಿ ಹೋಗತಕ್ಕವನೇ. ಅಷ್ಟರಲ್ಲಿ ನೇತಾಜಿಯು ಅವನ ಆ ಧೋರಣವನ್ನು ತಿಳಿದು, ಓಡಿ ಹೋಗಿ, ಅವನ ಕುದುರೆಯ ಕಡಿವಾಣವನ್ನು ಗಟ್ಟಿಯಾಗಿ ಹಿಡಿದನು. ಆಗ ಖಾನನು ನಾಚಿಕೊಂಡು ನಿರುಪಾಯನಾಗಿ ಕುದುರೆಯಿಂದ ಕೆಳಗಿಳಿದು, ನೇತಾಜಿಗೆ ಹೇಳಿಕೊಳ್ಳಲಾರಂಭಿಸಿದನು; ಏನಂದರೆ:—"ವೀರಪುರುಷನೇ, ನೀನು ಯಾರಿರುವಿ? ನನ್ನನ್ನು ಹೀಗೆ ಪ್ರತಿಬಂಧಿಸುವದರಲ್ಲಿ ನಿನ್ನ ಉದ್ದೇಶವೇನಿರುವದು? ನಾನು ರಾಜಮಾಚಿಯ ದುರ್ಗಕ್ಕೆ ಹೋಗುವದು ನಿನ್ನ ಮನಸ್ಸಿಗೆ ಬಾರದಿದ್ದರೆ, ನಾನು ಸುಮ್ಮನೆ ತಿರುಗಿ ಹೋಗುವೆನು."

ಆಯೂಬಖಾನನು ಈ ಮೇರೆಗೆ ಹೇಳಿಕೊಳ್ಳುತ್ತಿರಲು, ನೇತಾಜಿಯು ಕುದುರೆಯ ಹಗ್ಗವನ್ನು ಬಿಚ್ಚಿ, ಅವನ ಟೊಂಕಕ್ಕೆ ಬಿಗಿದನು; ಮತ್ತು ನುಡಿದನೇನಂದರೆ:—"ಸರದಾರಸಾಹೇಬ, ತಾವು ರಾಜಮಾಚಿಯ ದುರ್ಗವನ್ನು ಗುಪ್ತವಾಗಿ ನೋಡಬಂದಿದ್ದಿರಷ್ಟೆ? ಆದರೆ ಆ ದುರ್ಗವನ್ನು ನೋಡದೆ ಹಾಗೆಯೇ ಹೇಗೆ ಹೋಗುತ್ತೀರಿ? ನಾನು ನಿಮಗೆ ಆ ದುರ್ಗವನ್ನು ಪ್ರಸಿದ್ಧ ರೀತಿಯಿಂದ ತೋರಿಸುತ್ತೇನೆ, ನಡೆಯಿರಿ."

ಖಾನನು ಸಣ್ಣಮೋರೆ ಮಾಡಿಕೊಂಡು ನಿಂತನು. ಬಳಿಕ ನೇತಾಜಿಯು ರಾಮಜಿಯನ್ನು ಕುರಿತು:—"ರಾಮಜೀ, ನೀನು ಶುದ್ಧ ರಕ್ತದ ಮರಾಟನಿರುತ್ತೀ. ಧರ್ಮರಕ್ಷಣೆಗಾಗಿ ಹೆಣಗುವ ಶಿವಾಜಿಯ ದಂಡಿನಲ್ಲಿ ಸೇರಿಕೊಳ್ಳುವದು ನಿನಗೆ ಶ್ರೇಯಸ್ಕರವಿರುತ್ತದೆ. ಇದಕ್ಕೆ ನೀನು ಒಪ್ಪಿದರೆ, ನಿನ್ನನ್ನು ಶಿವಾಜಿಯ ದಂಡಾಳುವೆಂದು ರಾಜಮಾಚಿಯ ದುರ್ಗಕ್ಕೆ ಕರೆದೊಯ್ಯುವೆನು. ಇಲ್ಲದಿದ್ದರೆ ಈ ಖಾನನೊಡನೆ ನೀನೂ ಸೆರೆಯಾಳಿನಂತೆ ನನ್ನ ಜೊತೆಗೆ ರಾಜಮಾಚಿಗೆ ಬರಬೇಕಾಗುತ್ತದೆ" ಎಂದು ನುಡಿದನು. ರಾಮಜಿಯ ಮನಸ್ಸಿನಲ್ಲಿ ಪ್ರಾರಂಭದಿಂದಲೂ ಶಿವಾಜಿಯನ್ನು ಕೂಡಿಕೊಳ್ಳುವದಿತ್ತು; ಆದರೆ ಆತನ ಆಪ್ತೇಷ್ಟರು ವಿಜಾಪುರದ ಬಾದಶಹನಲ್ಲಿ ದೊಡ್ಡ ದೊಡ್ಡ ಹುದ್ದೆಗಳ ಮೇಲೆ ಇದ್ದದರಿಂದ, ಅವರ ಆಗ್ರಹಕ್ಕಾಗಿ ಆತನು ಮುಸಲ್ಮಾನರ ದಂಡಿನಲ್ಲಿ ಸೇರಿಕೊಂಡಿದ್ದನು; ಆದರೆ ಇಂದು ನೇತಾಜಿಯು ಅವನಿಗೆ ಒಳಿತಾಗಿ ಛೀ ಹಾಕಲು, ರಾಮಜಿಯು ನಾಚಿಕೊಂಡು, ಶಿವಾಜಿಯನ್ನು ಕೂಡಿಕೊಳ್ಳುವದಕ್ಕೆ ಸಂತೋಷದಿಂದ ಒಪ್ಪಿಕೊಂಡನು. ಬಳಿಕ ಅವನು ಖಾನನಿಗೆ ಸಲಾಂ ಮಾಡಿ:—"ಖಾನಸಾಹೇಬರೇ, ನಾನು ಇಂದಿನವರೆಗೆ ನಿಮ್ಮ ಗುಲಾಮನಾಗಿ ನಿಮ್ಮ ಸೇವೆ ಮಾಡಿದೆನು; ಆದರೆ ಇನ್ನು ಮುಂದೆ ಈ ರಾಮಜಿಯು ಮಾತೃಭೂಮಿಯ ನಿಸ್ಸೀಮ ಭಕ್ತನಾಗಿರುತ್ತಾನೆ. ರಾಜಮಾಚಿಯನ್ನು ಕದ್ದು ನೋಡುವ ನಿಮಗೆ ಸರ್ವರ ಸಮಕ್ಷಮ ನೋಡುವ ಸುಯೋಗವೊದಗಿತು." ಎಂದು ನುಡಿದನು. ಖಾನನು ಸಿಟ್ಟುಬೆಂಕಿಯಾಗಿದ್ದರೂ, ಹೊಟ್ಟೆಯೊಳಗಿನ ಸಿಟ್ಟು ರಟ್ಟೆಯೊಳಗಿಲ್ಲದ್ದರಿಂದ, ಕೆಳಮೋರೆ ಮಾಡಿಕೊಂಡು ನಿಂತನು.

ಬಳಿಕ ರಾಮಜಿಯೂ, ನೇತಾಜಿಯೂ ಆಯೂಬಖಾನನನ್ನೂ, ಆ ಕುದುರೆಗಳನ್ನೂ ತಕ್ಕೊಂಡು ರಾಜಮಾಚಿಗೆ ನಡೆದರು. ದಾರಿಯನ್ನು ಬಲ್ಲ ರಾಮಜಿಯು ಮುಂದೆ ಮುಂದೆ ನಡೆದನು. ಅವನು ದಾರಿಯಲ್ಲಿ ತಾನು ಇಷ್ಟು ದಿವಸ ಅಲ್ಲದ ಕೆಲಸ ಮಾಡಿದ್ದಕ್ಕೆ ಪಶ್ಚಾತ್ತಾಪವನ್ನು ಪ್ರಕಟಿಸಿ, ಈಗ ನಿಮ್ಮ ಭೆಟ್ಟಿಯು ಆಗದಿದ್ದರೆ ಬಹಳ ಅನರ್ಥವಾಗುತ್ತಿ

ತ್ತೆಂದು ಹೇಳಿ, ಮುಸಲ್ಮಾರ ದಂಡು ಸಮೀಪದಲ್ಲಿಯೇ ಬೀಡು ಬಿಟ್ಟ ದ್ದನ್ನೂ, ಅವರು ರಾಜಮಾಚಿಯನ್ನು ಗೆದ್ದುಕೊಳ್ಳಲಿಕ್ಕೆ ಮಾಡಿದ ಹಂಚಿಕೆಗಳನ್ನೂ, ತಾನು ಖಾನನೊಡನೆ ಇತ್ತ ಬಂದ ಕಾರಣವನ್ನೂ ಒಂದೂ ಉಳಿಯದಂತೆ ನೇತಾಜಿಗೆ ತಿಳಿಸಿದನು. ಅದನ್ನು ಕೇಳಿ ಆಯೂಬಖಾನನು, 'ಕಾಫರನು ಕಾಫರನನ್ನು ಕೂಡಿದನು!' ಎಂದು ಮನಸ್ಸಿನಲ್ಲಿಯೇ ಒಟಗುಟ್ಟಿದನು.

ಮುಂದೆ ಕೆಲವು ದಾರಿಯನ್ನು ಕ್ರಮಿಸಿದ ಬಳಿಕ ಗುಡ್ಡವನ್ನು ಏರಿ ಹೋಗುವ ಪ್ರಸಂಗ ಬಂತು. ಈ ಕುದುರೆಗಳನ್ನು ಹೀಗೆ ಮೇಲ ಕ್ಕೊಯ್ಯುವದು ದುಸ್ತರವೆಂದು ತಿಳಿದು, ನೇತಾಜಿಯು ರಾಮುಜಿಯನ್ನು ಕುರಿತು:—"ರಾಮುಜಿ, ನಿನಗೆ ಇಲ್ಲಿ ಎಲ್ಲಿಯಾದರೂ ಪರಿಚಯವಿದ್ದರೆ ಈ ಕುದುರೆಗಳನ್ನು ಇಟ್ಟು ಬಾ; ಇಲ್ಲವೆ ನಾನು ದುರ್ಗದೊಳಗೆ ಹೋಗಿ ತಿರುಗಿ ಬರುವವರೆಗೆ ನೀನು ಇವುಗಳ ಹತ್ತರವಾದರೂ ಇರು" ಎಂದು ಹೇಳಿದನು. ಆಗ ರಾಮುಜಿಯು ನೇತಾಜಿಯ ಕಿವಿಯಲ್ಲಿ ಏನೇನೋ ಹೇಳಿದನು. ಅದನ್ನು ಕೇಳಿ ನೇತಾಜಿಗೆ ಆನಂದವಾಯಿತು. ಆಗ ರಾಮುಜಿಯು ಒಂದು ಕುದುರೆಯನ್ನೇರಿದನು; ಮತ್ತು ಮತ್ತೊಂದನ್ನು ಕೈಯಲ್ಲಿ ಹಿಡಿದುಕೊಂಡು ಗುಡ್ಡದ ಓರೆ ಹಿಡಿದು ನಡೆದು, ಅವನು ಕ್ಷಣ ದಲ್ಲಿ ಕಾಣದಂತಾದನು. ಇತ್ತ ನೇತಾಜಿಯು ಆಯೂಬಖಾನನೊಡನೆ ದುರ್ಗದ ಕಡೆಗೆ ನಡೆದನು.

ದಾರಿಯು ಗೊತ್ತಿಲ್ಲದಿದ್ದರೂ ದುರ್ಗದ ಹೆಬ್ಬಾಗಿಲು ಕಾಣುತ್ತಿದ್ದುದ ರಿಂದ ಇನ್ನು ತಪ್ಪಿಸಿಕೊಳ್ಳುವ ಭಯವಿಲ್ಲೆಂದು ತಿಳಿದು, ನೇತಾಜಿಯು ಗುರಿ ನೋಡಿ ದಾರೀ ಹಿಡಿದನು. ಗುಡ್ಡಗಾಡು ಪ್ರದೇಶದಲ್ಲಿ ದಾರೀ ನಡೆದು ನಡೆದು ನೇತಾಜಿಗೆ ಅಭ್ಯಾಸವಿದ್ದದರಿಂದ, ಆತನಿಗೆ ಜಡವೆನಿಸ ಲಿಲ್ಲ; ಆದರೆ ಆಯೂಬಖಾನನಿಗೆ ಮಾತ್ರ ಪ್ರಾಣಾಂತ ಸಂಕಟವೇ ಪ್ರಾಪ್ತವಾದಂತಾಯಿತು. ಅವನಿಗೆ ಮೊದಲು ದಾರಿ ನಡೆದೇ ಅಭ್ಯಾಸ ವಿದ್ದಿಲ್ಲ. ಇಂಥದರಲ್ಲಿ ಗುಡ್ಡ ಹತ್ತುವ ಇಳಿಯುವ ದಾರಿ ಗಂಟು ಬಿದ್ದದರಿಂದ, ಅಂದು ಅವನದು ಅವನಿಗೆ ಆಗಿ ಹೋಯಿತು. ಅವನನ್ನು

ಸಂಬಾಳಿಸಿ ಕರಕೊಂಡು ದುರ್ಗಕ್ಕೆ ಹೋಗಬೇಕಾದರೆ ಎರಡು ತಾಸು ರಾತ್ರಿಯಾಯಿತು. ಅಷ್ಟೊತ್ತಿಗೆ ದುರ್ಗದ ಹೆಬ್ಬಾಗಿಲು ಇಕ್ಕಿತ್ತು. ಒಳಗೆ ಕಾವಲುಗಾರರು ಹರಟೆಹೊಡೆಯುತ್ತ ಕುಳಿತುಕೊಂಡಿದ್ದರು. ಆಗ ನೇತಾಜಿಯು ಹೆಬ್ಬಾಗಿಲ ಮೇಲೆ ಕೈಬಡೆದು, ಬಾಗಿಲ ತೆರೆಯ ಬೇಕೆಂದು ಗಂಭೀರ ಧ್ವನಿಯಿಂದ ಒದರಿದನು; ಆದರೆ ಒಳಗಿನ ಕಾವಲುಗಾರರು ಒಮ್ಮೆಲೆ:—ನೀವು ಯಾರು? ಎಂದು ಪ್ರಶ್ನೆ ಮಾಡಿದರು. ಆಗ ನೇತಾಜಿಯು:—ನಾನು ಗೋಸಾವಿಯು; ಈಗಿಂದೀಗಲೇ ಒಂದು ಮಹತ್ವದ ಕೆಲಸದ ಸಲುವಾಗಿ ದುರ್ಗಾಧಿಪತಿಯನ್ನು ಕಾಣಬೇಕಾಗಿದೆ. ಕಿಂಚಿತ್ತಾದರೂ ವಿಲಂಬಮಾಡದೆ ಬಾಗಿಲು ತೆರೆಯಿರಿ, ಎಂದನು. ಅದಕ್ಕೆ ಕಾವಲುಗಾರರು:—ಬಾಗಿಲು ತೆರೆಯಲಿಕ್ಕೆ ದುರ್ಗಾಧಿಪತಿಗಳ ಅಪ್ಪಣೆಯಿಲ್ಲ. ನಿಮ್ಮ ಕಡೆಗೆ ಪರವಾನಿಗೆ ಇದ್ದರೆ ಮಾತ್ರ ತೆರೆಯ ಲಾಗುವದು. ಪರವಾನಿಗೆ ಇಲ್ಲದಿದ್ದರೆ ಬೆಳಗಾಗುವ ವರೆಗೆ ನೀವು ಹೊರಗೇ ಕುಳಿತುಕೊಳ್ಳಬೇಕು, ಎಂದರು. ನೇತಾಜಿಯು ಅವರ ಈ ಉತ್ತರಕ್ಕೆ ಹತಾಶನಾಗದೆ:—ಬಾಗಿಲು ತೆರೆಯಲೇ ಬೇಕು; ಇಲ್ಲದಿದ್ದರೆ ಮಹತ್ವದ ಕೆಲಸವು ಕೆಡುವದು. ಪರವಾನಿಗೆ ಇಲ್ಲದಿದ್ದರೆ, ದುರ್ಗಾಧಿ ಪತಿಯ ಕಡೆಗೆ ಹೋಗಿ ಪರವಾನಿಗೆಯನ್ನು ತೆಗೆದುಕೊಂಡು ಬರ್ರಿ, ಎಂದು ದುಂಬಾಲಬಿದ್ದನು. ಗೋಸಾವಿಯು ಹೀಗೆ ಒಂದೇಸವನೆ ಒದರಹತ್ತಿದ್ದನ್ನು ನೋಡಿ ಕಾವಲುಗಾರರು ವಿಚಾರಕ್ಕೊಳಗಾದರು. ಇದರಲ್ಲಿ ಏನೋ ರಹಸ್ಯವಿರುವದೆಂದು ತರ್ಕಿಸಿದರೂ ಬಾಗಿಲು ತೆರೆ ಯುವ ಧೈರ್ಯವಾಗದ್ದರಿಂದ, ಒಬ್ಬ ಕಾವಲುಗಾರನು ದುರ್ಗಾಧಿಪತಿ ಯ ಕಡೆಗೆ ತೆರಳಿದನು; ಆದರೆ ಅಷ್ಟರಲ್ಲಿ ಪಹರೆಯು ಹೇಗೆ ನಡೆದಿದೆ? ಎಂಬದನ್ನು ನೊಡುವದಕ್ಕೆಂದು ಫೌಜದಾರನೇ ಅಲ್ಲಿಗೆ ಬಂದನು. ಕಾವಲುಗಾರರು ಅವನಿಗೆ ಗೋಸಾವಿಯ ಸಂಗತಿಯನ್ನು ಹೇಳಿದರು. ಆಗ ಆತನು ತನ್ನ ಜವಾಬುದಾರಿಯ ಮೇಲಿಂದ ಬಾಗಿಲನ್ನು ತೆರೆಯಿ ಸಿದನು. ಕೂಡಲೆ ವೀರಭದ್ರ ವೇಷದ ಒಬ್ಬ ಗೋಸಾವಿಯು ಹಾಗು ಸರ ದಾರೀ ಪೋಷಾಕಿನ ಒಬ್ಬ ಮುಸಲ್ಮಾನನು ಒಳಗೆ ಬಂದರು. ಅವರನ್ನು

ನೋಡಿ ಒಳಗಿನವರಿಗೆ ವಿಲಕ್ಷಣವಾಗಿ ತೋರಿತು. ಆಗ ನೇತಾಜಿಯು ಖಾನನನ್ನು ಸೆರೆ ಹಿಡಿದ ಬಗೆಯನ್ನು ಫೌಜದಾರನೆದುರಿಗೆ ಸ್ವಲ್ಪದರಲ್ಲಿ ಹೇಳಿ, ಈಗಿಂದೀಗಲೆ ದುರ್ಗಾಧಿಪತಿಯ ಅಥವಾ ದತ್ತಾಜಿ ಪಾಟೀಲನ ಭೆಟ್ಟೀ ಮಾಡಿಸಬೇಕೆಂದು ಹೇಳಿದನು. ನೇತಾಜಿಯು ಹೇಳಿದ ಪ್ರಕಾರವನ್ನು ಕೇಳಿ, ಆತನಿಗೆ ಆದಷ್ಟು ಬೇಗನೆ ದುರ್ಗಾಧಿಪತಿಯ ಭೆಟ್ಟೀ ಮಾಡಿಸಬೇಕೆಂದು ಫೌಜದಾರನು ಯೋಚಿಸಿ, ಖಾನನನ್ನು ಕಾವಲುಗಾರರಿಗೆ ಒಪ್ಪಿಸಿ, ನೇತಾಜಿಯನ್ನು ಸಂಗಡ ಕರೆದುಕೊಂಡು ದುರ್ಗಾಧಿಪತಿಯ ಬಳಿಗೆ ನಡೆದನು.

---

# ಗನೀಮೀ ಕಾವಾ.

ಕಿಲ್ಲೆದಾರನಾದ ತ್ರ್ಯಂಬಕಜಿಯು ಸಾಮಾನ್ಯ ಪ್ರತಿಯ ಮನುಷ್ಯ ನಿದ್ದನು. ಅವನಿಗೆ ದೊಡ್ಡಿಸ್ತನದ ಹವ್ಯಾಸ ಮಾತ್ರ ಬಹಳವಿತ್ತು; ಆದರೆ ದೊಡ್ಡಿಸ್ತನವು ಹೇಗೆ ಬರುವದೆಂಬದರ ಕಲ್ಪನೆಯೇ ಅವನಿಗಿದ್ದಿಲ್ಲ. ಅವನ ಈ ಸಾಮಾನ್ಯ ಯೋಗ್ಯತೆಯು ಶಿವಾಜಿಗೆ ಗೊತ್ತಿದ್ದರೂ, ಚಲೋ ಜನರ ಕೊರತೆಯ ಮೂಲಕವಾಗಿ ಅವನು ಇದ್ದ ಜನರಲ್ಲಿಯೇ ಕೆಲಸ ವನ್ನು ಹಂಚಿಕೊಡಬೇಕಾದ್ದರಿಂದ, ತ್ರ್ಯಂಬಕಜಿಯಂಥವನಿಗೆ ಅನಿವಾರ್ಯ ಹವೆಂದು ರಾಜಮಾಚಿಯ ಕಿಲ್ಲೆದಾರಿಕೆಯನ್ನು ಕೊಟ್ಟಿದ್ದನು. ಕಿಲ್ಲೆ ದಾರಿಯು ಸಿಗುವವರೆಗೆ ತ್ರ್ಯಂಬಕಜಿಯು ಅಲ್ಪ ಸ್ವಲ್ಪ ಪೌರುಷ ವನ್ನು ವ್ಯಕ್ತಪಡಿಸಹತ್ತಿದ್ದನು; ಆದರೆ ಕಿಲ್ಲೆದಾರಿಯು ದೊರೆತ ಕೂಡಲೆ ಅವನು ಸುಖಲೋಲುಪನಾದನು. ಅವನಿಂದ ಏನೂ ಕೆಲಸ ವಾಗದಂತಾಯಿತು. ರಾಜಮಾಚಿಯ ಕಿಲ್ಲೆಯು ತಕ್ಕಮಟ್ಟಿಗೆ ಭದ್ರ ವಿದ್ದರೂ, ಅಲ್ಲಲ್ಲಿ ಸ್ವಲ್ಪ ಮುರಕಳಿಗೆ ಬಂದಿತ್ತು. ಮುರಕಳಿಗೆ ಬಂದ ಭಾಗವನ್ನು ಸರಿಪಡಿಸಲಿಕ್ಕೆ ಶಿವಾಜಿಯು ತ್ರ್ಯಂಬಕರಾಯನಿಗೆ ತಿಳಿಸಿ ದ್ದನು; ಆದರೆ ಆ ಕಿಲ್ಲೆದಾರಿಯು ದೊರೆತಕೂಡಲೆ ತನ್ನ ಇತಿಕರ್ತವ್ಯ ತೆಯು ಮುಗಿಯಿತೆಂದು ತಿಳಿದ ಅವನು, ಆ ಕಡೆಗೆ ಮನಸು ಹಾಕಿ

ದ್ದಿಲ್ಲ. ಈ ಕೋಟೆಯ ಮೇಲೆ ಯಾವನು ಕೈ ಮಾಡುವನು? ಎಂಬ ಹೆಮ್ಮೆಯು ಮಾತ್ರ ಆತನಿಗೆ ಬಹಳವಾಗಿತ್ತು. ಆದ್ದರಿಂದ ಅವನು ಯಾವ ಚಿಂತೆಯೂ ಇಲ್ಲದೆ ಸುಖದಿಂದಿದ್ದನು.

ಫೌಜದಾರನು ನೇತಾಜಿಯನ್ನು ಕರೆದುಕೊಂಡು ಹೋದಾಗ ತ್ರ್ಯಂಬಕಜಿಯು ಗೊರಿಕೆಯನ್ನು ಹೊಡೆಯುತ್ತಿದ್ದನು. ಫೌಜದಾರನು ಒದರಿ ಒದರಿ ಎಬ್ಬಿಸಿದನು. ತ್ರ್ಯಂಬಕರಾಯನು ನಿದ್ದೆಗಣ್ಣಿನಲ್ಲಿ ಕಣ್ಣು ತೆರೆದು ನೋಡಿದನು. ಕೂಡಲೆ ಆವನು ಸ್ವಲ್ಪ ತಿರಸ್ಕಾರದಿಂದಲೇ ಫೌಜದಾರನನ್ನು ಕುರಿತು:—ಯಾವ ದೊಡ್ಡ ಕೆಲಸದ ಸಲುವಾಗಿ ನನಗೆ ಇಷ್ಟು ತೊಂದರೆ ಕೊಟ್ಟೆ? ಈ ಗೋಸಾವಿಗೆ ಮುಂಜಾವಿನಲ್ಲಿ ಭೆಟ್ಟಿಯಾಗಲಿಕ್ಕೆ ಬರುತ್ತಿದ್ದಿಲ್ಲವೆ? ಅಥವಾ ನೀನೇ ಏನಾದರೂ ಕೊಟ್ಟು ಕಳಿಸಿದ್ದರೆ, ಕೆಲಸ ಬಗೆ ಹರಿದು ಹೋಗುತ್ತಿತ್ತಲ್ಲ! ಎಂದು ನುಡಿದನು. ಕಿಲ್ಲೆದಾರನ ಈ ಮಾತಿಗೆ ಫೌಜದಾರನು ಏನೋ ಉತ್ತರ ಕೊಡ ತಕ್ಕವನಿದ್ದನು; ಅಷ್ಟರಲ್ಲಿ ಅವನಿಗೆ ಮಾತಾಡಲಿಕ್ಕೆ ಅವಕಾಶ ಕೊಡದೆ, ನೇತಾಜಿಯೇ ಒಳ್ಳೇ ಗಂಭೀರ! ಸ್ವರದಿಂದ ನುಡಿದನೇನಂದರೆ:— "ಕಿಲ್ಲೆದಾರ ಸಾಹೇಬರೇ, ಚನ್ನಾಗಿ ಎಚ್ಚರಗೊಳ್ಳಿರಿ. ಈಗ ನಿಮ್ಮನ್ನು ಎಚ್ಚರಗೊಳಿಸಿದ ಬಗ್ಗೆ ನಮ್ಮ ಉಪಕಾರವನ್ನು ಸ್ಮರಿಸಿರಿ. ಶತ್ರುಗಳ ದಂಡು ತೀರ ಹತ್ತಿರಕ್ಕೆ ಬಂದಿರುತ್ತದೆ. ಕೋಟೆಯನ್ನು ಉಳಿಸಿಕೊ ಳಲಿಕ್ಕೆ ಏನಾದರೂ ಪೂರ್ವ ಸಿದ್ಧತೆಯನ್ನು ನಡೆಸಿರಿ; ಇಲ್ಲದಿದ್ದರೆ ಶಿವಾಜಿಮಹಾರಾಜರು ಸಂಪಾದಿಸಿದ ಈ ಬಂಗಾರದಂತಹ ಕಿಲ್ಲೆಯನ್ನು ಕಳಕೊಂಡು ಕೂಡ್ರುವಿರಿ. ನಾನು ಗೊಸಾವಿಯಿರುವುದೇನೋ ನಿಜ; ಆದರೆ ನಿಮ್ಮ ಹತ್ತರ ಭಿಕ್ಷೆ ಬೇಡಲಿಕ್ಕೆ ಬಂದ ಗೋಸಾವಿಯಲ್ಲ. ನನ್ನ ಮಾತೃಭೂದೇವಿಯಲ್ಲಿ ಸ್ವರಾಜ್ಯ ಭಿಕ್ಷೆಯನ್ನು ಬೇಡುವ ಗೋಸಾವಿಯು ನಾನಿರುತ್ತೇನೆ. ನನ್ನ ಪ್ರಯತ್ನದಿಂದ ನನ್ನ ಜೋಳಿಗೆಯಲ್ಲಿ ಬಿದ್ದದ್ದನ್ನು ಕೂಡ ನಾನಿಟ್ಟುಕೊಳ್ಳುವದಿಲ್ಲ; ಅದರ ಆಶೆಯೂ ನನಗಿಲ್ಲ; ಅದನ್ನು ನಾನು ಶಿವಾಜಿಮಹಾರಾಜರ ಚರಣಕ್ಕೆ ಅರ್ಪಿಸತಕ್ಕವನಿದ್ದೇನೆ. ನನ್ನ ಒಂದು ಕೈಯಲ್ಲಿ ಭಿಕ್ಷಾಪಾತ್ರೆಯಿದೆ; ಇನ್ನೊಂದು ಕೈಯಲ್ಲಿ

ಅತ್ಯಂತ ತೀಕ್ಷ್ಣಧಾರೆಯುಳ್ಳ ಖಡ್ಗವಿರುತ್ತದೆ. ಈ ಖಡ್ಗವನ್ನು ಆಯೂಬಖಾನನು ತನ್ನ ಬಾಂಧವರ ಮೇಲೆ ಪ್ರಯೋಗಿಸುವದಕ್ಕೆಂದು ನನಗೆ ಕಾಣಿಕೆಯಾಗಿ ಕೊಟ್ಟಿರುತ್ತಾನೆ. ಶಿವಾಜಿ ಮಹಾರಾಜರ ಕಾರ್ಯ ಕ್ಕಾಗಿ ದೇಹ ಅರ್ಪಣ ಮಾಡಿಯೇ ನಾನು ಮನೆಯಿಂದ ಹೊರಟವ ನಿರುತ್ತೇನೆ. ಮಾರ್ಗದಲ್ಲಿ ಈ ಕಿಲ್ಲೆಯ ಮೇಲೆ ಶತ್ರುಗಳು ಸ್ವಾರೀ ಮಾಡುವರೆಂಬದು ತಿಳಿಯಲು, ಬುದ್ಧಿಪೂರ್ವಕವಾಗಿ ಇಲ್ಲಿಗೆ ಬಂದಿರು ತ್ತೇನೆ. ನೀವು ಏನು ಆಜ್ಞೆ ಮಾಡುವಿರೋ ಅದನ್ನು ಶಿರಸಾವಹಿಸಿ ಮಾಡಲಿಕ್ಕೆ ಸಿದ್ಧನಿರುತ್ತೇನೆ. ನಿಮ್ಮ ಇಚ್ಛೆಯು ಇಲ್ಲದಿದ್ದರೆ ಹೇಳಿರಿ. ಮಹಾರಾಜರ ಭೆಟ್ಟಿಗೋಸ್ಕರ ಹೊರಟು ಹೋಗುತ್ತೇನೆ.''

ನೇತಾಜಿಯ ಮಾತುಗಳು ಮುಗಿಯುವವರೆಗೂ ತ್ರ್ಯಂಬಕ ರಾಯನು ತಟಸ್ಥನಾಗಿ ಕುಳಿತಿದ್ದನು. ಶತ್ರುಗಳು ಹತ್ತಿರಕ್ಕೆ ಬಂದಿರುವ ರೆಂಬದನ್ನು ಕೇಳಿ ಅವನು ಗಾಬರಿಯಾದನು. ತಾನು ಗೋಸಾವಿ ಯನ್ನು ತಿರಸ್ಕರಿಸಿದ್ದು ಅನುಚಿತವಾಯಿತೆಂದು ಅವನಿಗೆ ಪಶ್ಚಾತ್ತಾಪ ವಾಯಿತು. ಆಗ ಅವನು ಆದರದಿಂದ ಎದ್ದು ನಿಂತು, ನೇತಾಜಿಯ ಕೈ ಹಿಡಿದು, ಬಳಿಯಲ್ಲಿ ಕುಳ್ಳಿರಿಸಿಕೊಂಡು ಕ್ಷಮೆಯನ್ನು ಬೇಡಿದನು. ಆಗ ನೇತಾಜಿಯು ಪ್ರಸಂಗೋಚಿತ ನಾಲ್ಕು ಮಾತುಗಳನ್ನಾಡಿ, ಶತ್ರು ಗಳಿಗೆ ಎದುರಾಗುವ ಸಿದ್ಧತೆಯನ್ನು ಮಾಡಿರಿ, ಎಂದು ನುಡಿದು, ತನಗೆ ಗೊತ್ತಾದ ಎಲ್ಲ ಸಂಗತಿಗಳನ್ನೂ ಹೇಳಿದನು. ಆ ಕೂಡಲೆ ತ್ರ್ಯಂಬಕ ರಾಯನು ಮುರಕಳಿಗೆ ಬಂದ ಕಿಲ್ಲೆಯ ಭಾಗವನ್ನು ಕಟ್ಟಿಸುವದಕ್ಕೆ ಪಂಜುಗಳನ್ನು ಹಚ್ಚಿಸಿಕೊಂಡು ಹೊರಹೊರಟನು. ಇತ್ತ ನೇತಾಜಿ ಯು ದತ್ತಾಜಿ ಪಾಟೀಲನಿಗೆ ಭೆಟ್ಟಿಯಾಗುವದಕ್ಕೋಸ್ಕರ ಅವನ ಮನೆಗೆ ನಡೆದನು.

ದತ್ತಾಜಿ ಪಾಟೀಲನು ಚೌಕಗ್ರಾಮದವನೆಂಬದು ನಮ್ಮ ವಾಚಕ ರಿಗೆ ಈ ಮೊದಲೇ ಗೊತ್ತಾಗಿರುವದು. ಆತನಿಗೆ ಗಂಡುಮಕ್ಕಳಿದ್ದಿಲ್ಲ. ಕಾಶಿಯೆಂಬ ಓರ್ವಳೇ ಸುಂದರಿಯಾದ ಮಗಳಿದ್ದಳು. ಆಕೆಯನ್ನು ನೇತಾಜಿಗೆ ಕೊಡಬೇಕೆಂದು ಅವನು ಗೊತ್ತುಮಾಡಿದ್ದನು. ಕಾಶಿಯೂ

ನೇತಾಜಿಯೂ ಚಿಕ್ಕಂದಿನಿಂದ ಕೂಡಿ ಆಡಿದವರಾದ್ದರಿಂದ, ಕಾಶಿಯ ಪ್ರೇಮವು ನೇತಾಜಿಯ ಮೇಲೂ, ನೇತಾಜಿಯ ಪ್ರೇಮವು ಕಾಶಿಯ ಮೇಲೂ ಕೂಡ್ರುವದು ಸ್ವಾಭಾವಿಕವಾಗಿತ್ತು; ಆದರೆ ನೇತಾಜಿಯು ಈ ಕಾದಂಬರಿಯ ಮೊದಲನೇ ಪ್ರಕರಣದಲ್ಲಿ ಹೇಳಿದಂತೆ ಗಂಡಾಂತರಕ್ಕೆ ಒಳಗಾದದ್ದರಿಂದ, ದತ್ತಾಜಿಯೂ ಕಾಶಿಯೂ ಭಯಂಕರ ಚಿಂತೆಗೊಳಗಾಗಿದ್ದರು. ಹೀಗಿರಲು, ಈ ದಿನ ಸರಿರಾತ್ರಿಯಲ್ಲಿ ನೇತಾಜಿಯು ಕಿಲ್ಲೆದಾರನ ಸೇವಕನಿಂದ ತೋರಿಸಲ್ಪಟ್ಟ ದತ್ತಾಜಿಯ ಮನೆಯ ಮುಂದೆ ನಿಂತು, ಬಾಗಿಲು ತೆರೆಯಿರೆಂದು ಒದರುತ್ತ ಬಾಗಿಲಬಡಿಯಹತ್ತಿದನು. ಕಾಶಿಯೂ ಆಕೆಯ ಒಬ್ಬ ದಾಸಿಯೂ ಬಾಗಿಲ ಬಳಿಯಲ್ಲಿಯೇ ಮಲಗಿದ್ದರು. ಆದ್ದರಿಂದ ಅವರಿಗೇ ಮೊದಲು ಎಚ್ಚರವಾಯಿತು. ದನಿಯು ಗುರುತಿನದಿದ್ದು, ಇಂಥವರವೇ ಎಂಬದು ಗೊತ್ತಾಗದ್ದರಿಂದ, ಕಾಶಿಯೂ ಆಕೆಯ ದಾಸಿಯೂ ಗೊಂದಲದಲ್ಲಿ ಬಿದ್ದರು. ಕೊನೆಗೆ ಬಾಗಿಲ ತೆರೆಯಬೇಕೆಂದು ನಿರ್ಧರಿಸಿ, ದಾಸಿಯು ದೀವಟಿಗೆಯನ್ನು ಹಚ್ಚಿದಳು. ಕಾಶಿಯು ಬಾಗಿಲ ತೆರೆದಳು. ಆಗ ಒಬ್ಬ ಗೋಸಾವಿಯು ಬಾಗಿಲಲ್ಲಿ ನಿಂತಿರುವನೆಂಬದು ಅವಳಿಗೆ ತಿಳಿಯಿತು. ಕೂಡಲೆ ಅವಳು:-"ಇದೇನೇ ನಮ್ಮವ್ವಾ, ಇವನೆಂಥ ಗೋಸಾವಿಯು? ಸರಿರಾತ್ರಿಯಲ್ಲಿ ಭಿಕ್ಷೆಬೇಡ ಬಂದ ಗೋಸಾವಿಯನ್ನು ನೋಡಿದ್ದು ಇದೇ ಮೊದಲು!" ಎಂದು ನುಡಿಯುತ್ತ ಹಿಂದಕ್ಕೆ ಸರಿದಳು. ದಾಸಿಯು ದೀವಟಿಗೆಯ ಬೆಳಕಿನಲ್ಲಿ ಗೋಸಾವಿಯನ್ನು ನೋಡಿ, ತಿರಸ್ಕಾರದಿಂದ:—"ಮಲಗಿದವರನ್ನಾ ಎಬ್ಬಿಸುವ ನೀನೆಂಥ ಗೋಸಾವಿಯಪ್ಪಾ? ನಾಳೆ ಬೆಳಿಗ್ಗೆ ಬಾ; ಅಂದರೆ ಪಾಟೀಲರಿಂದ ನಿನಗೆ ಏನಾದರೂ ಸಿಗುವದು" ಎಂದಳು. ಆಗ ನೇತಾಜಿಯು:—"ನಾನು ಪಾಟೀಲರಲ್ಲಿ ಭಿಕ್ಷೆಬೇಡಬಂದದ್ದು ನಿಜ; ಆದರೆ ಅದಕ್ಕಿನ್ನೂ ಅವಕಾಶವಿರುವದು; ಆದರೂ ಅವರ ಕಡೆಗೆ ಮಹತ್ವದ ಕೆಲಸವಿರುವದರಿಂದ ಅವರೆಲ್ಲಿರುವರೆಂಬದನ್ನು ಹೇಳಿರಿ" ಎಂದನು. ದಾಸಿಯು ನಿದ್ದೆಗಣ್ಣಿನಲ್ಲಿ ಆಕಳಿಸುತ್ತ:—"ಅವರು ಈಗ ಮಲಗಿರುವದರಿಂದ ಏಳಲಾರರು; ಏನು ಕೆಲಸವಿದ್ದರೂ ನಾಳೆಗೆ ನೋಡಿಕೋ.

ಹೊರಗೆ ನಡೆ, ಬಾಗಿಲು ಇಕ್ಕುವೆನು'' ಎಂದು ನುಡಿದಳು. ಇನ್ನು ಮುಂದೆ ಹೆಸರು ಹೇಳದಿದ್ದರೆ ಗತ್ಯಂತರವಿಲ್ಲೆಂದು ತಿಳಿದು, ನೇತಾಜಿಯು:—"ಚೌಕಗ್ರಾಮದ ನೇತಾಜಿ ಬಂದಿರುವನೆಂದು ಪಾಟೀಲರಿಗೆ ಹೇಳಿರಿ" ಎಂದನು. 'ನೇತಾಜಿ' ಎಂಬ ಶಬ್ದವು ಕಿವಿಗೆ ಬಿದ್ದ ಕೂಡಲೇ ಕಾಶಿಯೂ ದಾಸಿಯೂ ಆಶ್ಚರ್ಯಚಕಿತರಾದರು. ಕಾಶಿಯಂತೂ ನಾಚಿಕೊಂಡು ಮರೆಗೆ ಹೋದಳು. ಕೂಡಲೆ ದಾಸಿಯು:—"ನೀವು ಚೌಕಗ್ರಾಮದ ನೇತಾಜಿಯವರೇ?" ಎಂದು ನುಡಿದು, ದತ್ತಾಜಿಯನ್ನೆಬ್ಬಿಸಲಿಕ್ಕೆ ಒಳಗೆ ಹೋದಳು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ದತ್ತಾಜಿಯು ಹೊರಗೆ ಬಂದನು. ನೇತಾಜಿಯು ತನ್ನ ಕೈಯೊಳಗಿನ ಭಲ್ಲೆಯನ್ನು ಕೆಳಗಿಟ್ಟು, ದತ್ತಾಜಿಗೆ ಸಾಷ್ಟಾಂಗ ನಮಸ್ಕಾರವನ್ನು ಹಾಕಿದನು. ದತ್ತಾಜಿಯು ನೇತಾಜಿಯನ್ನು ಬಹಳವಾಗಿ ಪ್ರೀತಿಸುತ್ತಿದ್ದನು ಆದ್ದರಿಂದ ಆತನಿಗೆ ಹಿಡಿಸಲಾರದಷ್ಟು ಆನಂದವಾಗಿ, ನೇತಾಜಿಯನ್ನು ಅಪ್ಪಿಕೊಂಡನು. ಬಳಿಕ ಅವರಿಬ್ಬರಲ್ಲಿ ಯೋಗಕ್ಷೇಮ ವಿಚಾರವು ನಡೆಯಿತು. ಕಾಶಿಯು ಅವರಿಬ್ಬರ ಮಾತುಗಳನ್ನು ಕೇಳುತ್ತ, ನಡುಮನೆಯ ಬಾಗಿಲ ಮರೆಗೆ ಬಂದು ನಿಂತಳು. ಮೊದಲು ನೇತಾಜಿಯು ತನ್ನ ಎಲ್ಲ ಸಂಗತಿಯನ್ನೂ ಹೇಳಿದನು. ಬಳಿಕ ದತ್ತಾಜಿಯು ಎರಡು ವರ್ಷಗಳಲ್ಲಿ ತನಗೆ ಬಂದ ವಿಪತ್ತುಗಳನ್ನು ಹೇಳಿದನು. ಅನಂತರ ನೇತಾಜಿಯು ಕಿಲ್ಲೆಯ ಹತ್ತರ ಮುಸಲ್ಮಾನರ ದಂಡು ಬಂದದ್ದನ್ನು ಹೇಳಿ, ಬೆಳಗಾಗುವಷ್ಟರಲ್ಲಿಯೇ ದತ್ತಾಜಿಗೆ ಕಿಲ್ಲೆಯನ್ನು ಬಿಡಲಿಕ್ಕೆ ತಿಳಿಸಿದನು. ಅವರಿಬ್ಬರೂ ಬಹಳವಾಗಿ ಆಲೋಚಿಸಿ, ದತ್ತಾಜಿಯು ಕಾಶಿಯೊಡನೆ ಲೋಹಗಡಕ್ಕೆ ಹೊಗಬೇಕೆಂದು ನಿರ್ಧರಿಸಿದರು. ರಾತ್ರಿಯು ಬಹಳವಿರದ್ದರಿಂದ, ಕಾಶಿಯೂ ದಾಸಿಯೂ ಕೂಡಿ ಬೇಗನೆ ಉಪಾಹಾರವನ್ನು ಸಿದ್ಧಗೊಳಿಸಿದರು. ಅಷ್ಟರಲ್ಲಿ ದತ್ತಾಜಿಯು ನಾವಲಿಗನನ್ನು ಕರೆಯಿಸಿ, ನೇತಾಜಿಗೆ ಕ್ಷೌರವನ್ನು ಮಾಡಿಸಿ, ಬಿಸಿನೀರಿನಿಂದ ಮಂಗಲ ಸ್ನಾನವನ್ನು ಮಾಡಿಸಿದನು. ಕ್ಷೌರದ ನಂತರ ನೇತಾಜಿಯು ಅತ್ಯಂತ ಸುಂದರನಾಗಿ ತೋರಹತ್ತಿದನು. ಬಳಿಕ ಅವರಿಬ್ಬರೂ ಹೊಟ್ಟೆ

ತುಂಬ ಫಲಾಹಾರ ಮಾಡಿದರು. ಆ ಮೇಲೆ ದತ್ತಾಜಿಯು ತನ್ನ ಪರಿವಾರವನ್ನು ಕಟ್ಟಿಕೊಂಡು ಮೂಡಲು ಕೆಂಪಾಗುವಷ್ಟರಲ್ಲಿ ಕೋಟಿಯಿಂದ ಹೊರಬಿದ್ದನು. ಮೊದಮೊದಲು ನೇತಾಜಿಯೂ ತಮ್ಮ ಸಂಗಡ ಲೋಹಗಡಕ್ಕೆ ಬರುವನೆಂದು ಕಾಶಿಯು ತಿಳಿದಿದ್ದಳು; ಆದರೆ ಆತನು ಕೋಟೆಯಲ್ಲಿಯೇ ನಿಂತುಕೊಳ್ಳಲು, ಆಕೆಗೆ ತುಂಬಾ ವ್ಯಸನವಾಯಿತು. ಆಗ ನೇತಾಜಿಯು:—''ಇಲ್ಲಿಯ ಕಿಲ್ಲೇದಾರನಿಗೆ ವಚನ ಕೊಟ್ಟಿದ್ದೇನೆ. ಆದ್ದರಿಂದ ಈ ಕಿಲ್ಲೆಯ ಭವಿತವ್ಯವು ಏನಿರುವದೆಂಬದು ತಿಳಿಯುವ ತನಕ ನನಗೆ ಲೋಹಗಡಕ್ಕೆ ಬರಲಿಕ್ಕೆ ಆಗುವದಿಲ್ಲ'' ಎಂದು ಹೇಳಿದನು. ನಿರ್ವಾಹವಿಲ್ಲದೆ ಕಾಶಿಯು ಅವನಿಂದ ಅಪ್ಪಣೆ ತೆಗೆದುಕೊಂಡು, ತಂದೆಯನ್ನು ಹಿಂಬಾಲಿಸಿದಳು. ಬಳಿಕ ನೇತಾಜಿಯು ಕಿಲ್ಲೆಯ ಕಾವಲುಗಾರರ ಕಡೆಗೆ ತಿರುಗಿದನು.

ನೇತಾಜಿಯು ಶೂರನಿದ್ದಂತೆ ಚತುರನೂ ಮಾತು ಬಲ್ಲವನೂ ಆಗಿದ್ದನು. ಅವನು ಕಾವಲುಗಾರರ ಮೇಲೂ, ಕಿಲ್ಲೆಯೊಳಗಿನ ದಂಡಾಳುಗಳ ಮೇಲೂ ತನ್ನ ವಿಲಕ್ಷಣ ಶಕ್ತಿಯಿಂದ ಒಳ್ಳೇ ದರ್ಪವನ್ನು ಕೂಡ್ರಿಸಿದನು. ಅವನು ಒಮ್ಮೆ ಆ ಕಿಲ್ಲೆಯಲ್ಲೆಲ್ಲ ಅಡ್ಡಾಡಿ, ಅದನ್ನು ಚೆನ್ನಾಗಿ ನಿರೀಕ್ಷಿಸಿದನು. ಕಿಲ್ಲೇದಾರನು ಬೆಳತನಕ ಕಷ್ಟಬಟ್ಟು ಕಿಲ್ಲೆಯ ಒಡಕುಗಳನ್ನು ಮುಚ್ಚಿಸಿದನು. ಅಷ್ಟರಲ್ಲಿ ಸೂರ್ಯೋದಯವಾಗಲು, ಈಶಾನ್ಯದಿಕ್ಕಿಗೆ ಕೆಂಧೂಳವು ಏಳಹತ್ತಿತು. ಆದ್ದರಿಂದ ವಿಜಾಪುರದವರ ದಂಡು ಬಂತೆಂದು ಎಲ್ಲರೂ ತರ್ಕಿಸಿದರು. ತ್ರ್ಯಂಬಕರಾಯನು ಅಂಜಿ ನಡುಗಲಾರಂಭಿಸಿದನು. ಆಗ ನೇತಾಜಿಯು ಅವನಿಗೆ ಧೈರ್ಯ ಹೇಳಿ, ಕಿಲ್ಲೆಯಲ್ಲಿ ಎಷ್ಟು ದಂಡಿರುವದೆಂಬದನ್ನು ಶೋಧಿಸಿದನು. ೩-೪ ದಿವಸಗಳ ಹಿಂದೆ ಶಿವಾಜಿಮಹಾರಾಜರು ಅಲ್ಲಿಯ ದಂಡನ್ನು ತರಿಸಿಕೊಂಡದ್ದರಿಂದ, ಕೋಟೆಯಲ್ಲಿ ಸ್ವಲ್ಪೇ ದಂಡಾಳುಗಳಿದ್ದರು. ನೇತಾಜಿಯು ಇದ್ದಷ್ಟು ದಂಡಾಳುಗಳಿಂದಲೇ ಶತ್ರುಗಳಿಗೆ ಕೈತೋರಿಸಬೇಕೆಂದು ನಿರ್ಧರಿಸಿದನು. ಮೊದಲು ಅವನು ಕಿಲ್ಲೆಯೊಳಗಿನ ಜನರು ಅಜಾಗರೂಕರಾಗಿರುವರೆಂಬದು ಶತ್ರುಗಳಿಗೆ

ತಿಳಿದುಬರುವಂತೆ, ಹೆಬ್ಬಾಗಿಲದ ಹೊರಭಾಗದಲ್ಲಿ ಆಡು-ಕುರಿಗಳನ್ನು ಮೇಯಲಿಕ್ಕೆ ಬಿಟ್ಟನು. ದಕ್ಷಿಣಭಾಗದಲ್ಲಿ ತೋಫಿಗೆ ಕಿಂಡಿಬೀಳಬಹುದಾದ ಸ್ಥಳದಲ್ಲಿ ದೊಡ್ಡ ದೊಡ್ಡ ದುಂಡು ಕಲ್ಲಿನ ರಾಶಿಗಳನ್ನು ಒಟ್ಟಿಸಿದನು. ನೇತಾಜಿಯು ಹೀಗೇಕೆ ಮಾಡುತ್ತಿರುವನೆಂಬದು ಅದಾರಿಗೂ ತಿಳಿಯಲಿಲ್ಲ.

ಈ ಮೇರೆಗೆ ನೇತಾಜಿಯು ವ್ಯವಸ್ಥೆ ಮಾಡಿಸುತ್ತಿರುವಷ್ಟರಲ್ಲಿ ಮುಸಲ್ಮಾನರ ದಂಡು ನೆಟ್ಟಗೆ ಕಿಲ್ಲೆಯ ಬುಡಕ್ಕೆ ಬಂದಿತು; ಮತ್ತು ಅಲ್ಲಿ ಬೀಡು ಬಿಡುವ ಹಂಚಿಕೆ ಮಾಡಿತು. ಕೆಲವರು ರಾಹುಟಿಗಳನ್ನು ಸಿದ್ಧಪಡಿಸಲಾರಂಭಿಸಿದರು. ಕೆಲವರು ಕಿಲ್ಲೆಯ ಮೇಲೆ ಮರಾಟರ ಸುಳಿದಾಟವನ್ನು ಪರೀಕ್ಷಿಸಿ ನೋಡತೊಡಗಿದರು. ನೇತಾಜಿಯ ಹಂಚಿಕೆಯಿಂದ ಕಿಲ್ಲೆಯ ಮೇಲೆ ಯುದ್ಧಸನ್ನದ್ಧತೆಯ ಚಿಹ್ನವಾವುದೂ ಅವರಿಗೆ ಕಂಡುಬರಲಿಲ್ಲ. ಹೆಬ್ಬಾಗಿಲ ಬಳಿಯಲ್ಲಿ ಆಡು-ಕುರಿಗಳು ಮೇಯುತ್ತಿರುವದರಿಂದ, ಕೋಟೆಯೊಳಗಿನವರು ಅಜಾಗರೂಕರಾಗಿರುವರೆಂದು ಅವರು ತರ್ಕಿಸಿದರು. ಈ ತರ್ಕದಿಂದ ೨೦೦-೩೦೦ ಜನ ಮುಸಲ್ಮಾನ ಸಿಪಾಯಿಗಳು ಹೆಬ್ಬಾಗಿಲದ ಕಡೆ ಧಾವಿಸಿ ಬಂದರು. ಗುಡ್ಡದ ಏರಿಯು ಬಹಳ ಕಡಿದು ಇದ್ದದರಿಂದ, ಆ ಸಿಪಾಯಿಗಳಿಗೆ ಬಹಳ ತೊಂದರೆಯಾಯಿತು. ಹೇಗಾದರೂ ಅವರು ಕಷ್ಟಬಟ್ಟು ಅರ್ಧದಾರೀ ಬರುವಷ್ಟರಲ್ಲಿ ಮೇಲಿನಿಂದ ಮರಾಟರು ಹೊಡೆಯಲುಪಕ್ರಮಿಸಿದರು. ಅವರ ಹೊಡೆತಕ್ಕೆ ಅರ್ಧಮರ್ಧ ಸಿಪಾಯಿಗಳು ಉರುಳಿ ಗುಡ್ಡದ ಕೆಳಭಾಗವನ್ನು ಕಂಡರು! ಉಳಿದವರು ಬಂದ ದಾರಿಯಿಂದ ಬದುಕಿ ತಿರುಗಿ ಹೊಗಬೇಕಾದರೆ ಸಾಕು ಸಾಕಾಯಿತು! ಹೀಗೆ ಪ್ರಾರಂಭಕ್ಕೇ ನೂರಿನ್ನೂರು ಜನ ಸಿಪಾಯಿಗಳು ಸತ್ತದ್ದರಿಂದ, ಮುಸಲ್ಮಾನರು ತ್ವೇಷಗೊಂಡರು. ಅವರು ತೋಫುಗಳನ್ನು ಸಜ್ಜುಗೊಳಿಸಿದರು; ಮತ್ತು ಕಿಲ್ಲೆಯ ದಕ್ಷಿಣ ನಿಟ್ಟಿನಲ್ಲಿ ಹೊಸದಾಗಿ ಕಟ್ಟಿಸಿದ ಗುರುತನ್ನು ನೋಡಿ ಅದಕ್ಕೆ ನೀಟಾಗಿ ತೋಫನ್ನಿಟ್ಟು ಹೊಡೆಯಲಾರಂಭಿಸಿದರು. ಕಿಲ್ಲೆಯಲ್ಲಿ ಸಣ್ಣ ಸಣ್ಣ ಮೂರೇ ತೋಫುಗಳಿದ್ದುವು.

ಆವು ಹಳೆಯುವಾದ್ದರಿಂದ, ಯಾವ ಹೊತ್ತಿಗೆ ಘಾತ ಮಾಡುವವೆಂಬು ದರ ನಿಯಮವಿದ್ದಿಲ್ಲ. ನೇತಾಜಿಯು ಆ ಮೂರೂ ತೋಫುಗಳನ್ನು ಸುರುವು ಮಾಡಿಸಿದನು; ಆದರೆ ಅದರಲ್ಲಿ ಒಂದು ತೋಫು ಶೀರಾ ನಿರುಪಯೋಗವಾಯಿತು. ಇನ್ನೆರಡು ತೋಫುಗಳು ಮಂದ ಮಂದ ವಾಗಿ ಶತ್ರುಸಂಹಾರದ ಕಾರ್ಯವನ್ನು ನಡೆಸಿದುವು. ಇದಕ್ಕೆ ವಿರುದ್ಧ ವಾಗಿ ಮುಸಲ್ಮಾನರ ತೋಫುಗಳು ಹೊಸವಿದ್ದವು; ಮತ್ತು ಬಹು ದೂರಿನ ಗುರಿಯನ್ನು ಕೆಡವುವಷ್ಟು ಶಕ್ತಿಯುಳ್ಳವಿದ್ದವು. ತ್ರ್ಯಂಬಕ ರಾಯನು ಮುಸಲ್ಮಾನರ ಅಪಾರ ಸೈನ್ಯವನ್ನೂ ಅವರ ತೋಫುಗಳನ್ನೂ ನೋಡಿ ಹೌಹಾರಿ ಹೋದನು! ನೇತಾಜಿಯು ಅವನನ್ನು ಏಕಾಂತ ದಲ್ಲಿ ಕರೆದೊಯ್ದು:—“ನೀನು ಹೀಗೆ ಬಹಿರಂಗದಲ್ಲಿಯಾದರೂ ಕೈ ಕಾಲುಗೆಡಬೇಡ. ನಾವು ಶಕ್ತಿ ಮೀರಿ ಹೆಣಗಿ ಶತ್ರುಗಳನ್ನು ಹಿಂದಕ್ಕಟ್ಟು ವೆವು. ಅಂಥ ಪ್ರಸಂಗ ಬಂದರೆ ಶ್ರೀವರ್ಧನದ ಬಾಲೆ ಕಿಲ್ಲೆಯು ಸಿದ್ಧ ವಿರುವದು. ಅಲ್ಲಿಗೆ ನಿಮ್ಮ ಪರಿವಾರವನ್ನು ಸಾಗಿಸಲಿಕ್ಕೆ ಬರುವದು. ನಾನು ಸೂಚನೆ ಕೊಟ್ಟ ಕೂಡಲೆ ನೀವು ಆ ಕೆಲಸವನ್ನು ಮಾಡಿರಿ. ನಾನು ದಂಡಿಗೆ ಧೈರ್ಯ ಕೊಟ್ಟು ಶತ್ರುಗಳನ್ನು ಅಡ್ಡಗಟ್ಟುತ್ತೇನೆ.” ಎಂದು ಹೇಳಿದನು. ನೇತಾಜಿಯ ಯುಕ್ತಿಗೆ ಕಿಲ್ಲೆದಾರನು ಸಮಾ ಧಾನಪಟ್ಟನು.

ಇತ್ತ ಮುಸಲ್ಮಾನರು ಹಚ್ಚಿದ ತೋಫಿನ ಹೊಡೆತವು ಬಲವಾಗ ಹತ್ತಿದ್ದರಿಂದ, ಹೊಸದಾಗಿ ಕಟ್ಟಿಸಿದ ಕಿಲ್ಲೆಯ ಗೋಡೆಯು ಕತ್ತರಿ ಸಿತು. ಆ ಸ್ಥಳದಲ್ಲಿ ಬಹು ದೊಡ್ಡದಾದ ಕಿಂಡಿಯು ಬಿದ್ದಿತು. ಕಿಲ್ಲೆಗೆ ಕಿಂಡಿ ಬೀಳಲು, ಮುಸಲ್ಮಾನರ ದಂಡಿನಲ್ಲಿ ಎಲ್ಲಿ ನೋಡಿದರೂ “ಅಲ್ಲಾಹೋ ಅಕಬರ!” ಎಂಬ ಜಯ ಜಯಕಾರದ ಧ್ವನಿಯೇ ಕೇಳ ಬರಹತ್ತಿತು. ನಾಲ್ಕೈದು ನೂರು ಜನ ಮುಸಲ್ಮಾನರು ಖಡ್ಗಧಾರಿ ಗಳಾಗಿ ಗುಡ್ಡವನ್ನೇರ ಹತ್ತಿದರು. ಆಗ ನೇತಾಜಿಯು ಸಿಳ್ಳು ಹಾಕಿ ಮರಾಟರ ಸೈನ್ಯವನ್ನು ಒಟ್ಟುಗೂಡಿಸಿ, ಆ ಕಿಂಡಿಯ ಹತ್ತರ ನಿಲ್ಲಿಸಿ ದನು; ಮತ್ತು ಗುಡ್ಡದ ಮೇಲೇರಿ ಬರುವ ಮುಸಲ್ಮಾನರ ಮೇಲೆ

ಕಿಲ್ಲೆಯ ಮೇಲಿನ ದುಂಡಿಗಳನ್ನು ಉರುಳಿಸಲಿಕ್ಕೆ ಅಪ್ಪಣೆ ಮಾಡಿದನು. ಕೂಡಲೆ ಮರಾಟರು ರಾಶಿಗಟ್ಲೆ ಬಿದ್ದಿರುವ ದುಂಡಿಗಳನ್ನು ಉರುಳಿಸ ಹತ್ತಲು, ಅವು ಮುಸಲ್ಮಾನ ಸಿಪಾಯಿಗಳ ಜೀವವನ್ನು ಹರಣ ಮಾಡ ಹತ್ತಿದವು. ಮೇಲಕ್ಕೆ ಬಂದ ಸಿಪಾಯಿಗಳೆಲ್ಲರೂ ದುಂಡಿಗಳ ಬುಡಕ್ಕೆ ಸಿಕ್ಕು ಜಿಬ್ಬೆಯಾದರು; ಇನ್ನೂ ಕೆಳಗಿದ್ದವರು ಅಂಜಿ ಹಿಂಜರಿದರು. ನೇತಾಜಿಯ ಈ ಹಂಚಿಕೆಗೆ ಮರಾಟರೆಲ್ಲರೂ ಅಚ್ಚರಿಗೊಂಡರು. ಇದ ರಿಂದ ನೇತಾಜಿಯನ್ನು ಅವರು ಹೆಚ್ಚಾಗಿ ಮನ್ನಿಸಹತ್ತಿದರು.

ಹೀಗೆ ಮೇಲೇರುವ ಮುಸಲ್ಮಾನರನ್ನು ಕಿಲ್ಲೆಯೊಳಗಿನ ಮರಾ ಟರು ಯಮಸದನಕ್ಕೆ ಅಟ್ಟಹತ್ತಲು, ಮುಸಲ್ಮಾನರು ಅತ್ಯಂತ ಖತಿ ಗೊಂಡರು. ಆಗ ಒಬ್ಬ ಸಿದ್ದೀ ತರುಣನು ಆರುನೂರು ಜನರದೊಂದು ತುಕ್ಕಡಿಯನ್ನು ತಕ್ಕೊಂಡು ಮೈಮೇಲೆ ಬರುವ ದುಂಡಿಗಳನ್ನು ಲೆಕ್ಕಿ ಸದೆ ಗುಡ್ಡವನ್ನು ಏರಹತ್ತಿದನು. ಅಷ್ಟರಲ್ಲಿ ಮರಾಟರಲ್ಲಿದ್ದ ದುಂಡಿ ಗಳೂ ತಿರಿದವು. ಆಗ ಆ ದಂಡಾಳುಗಳು ನಿರ್ಭಯರಾಗಿ ಸರಸರನೆ ಮೇಲೇರಹತ್ತಿದರು. ಅವರ ನಾಯಕನಾದ ಆ ಸಿದ್ದೀ ವೀರನು ಪ್ರತ್ಯಕ್ಷ ರಾಕ್ಷಸನೇ ಆಗಿದ್ದನು. ಅವನ ಢಾಲು ಕಸುವಿನವನೇ ನೆಗವ ಬಹುದಾಗಿತ್ತು! ಅವನ ಖಡ್ಗವು ಒಳ್ಳೇ ನಿಡಿದಾಗಿತ್ತು. ವೇಷಕ್ಕೆ ತಕ್ಕಂತೆ ಅವನು ಬಹು ಕ್ರೂರ ಸ್ವಭಾವದವನೂ ಎತ್ತರ ನಿಲುವಿಕೆ ಯವನೂ ಆಗಿದ್ದನು. ಅವನ ದೇಹವು ಉಕ್ಕಿನಂತೆ ಕಠಿಣವಿತ್ತು. ಮೇಲಾಗಿ ಅವನು ಯುದ್ಧದಲ್ಲಿ ಕುಶಲನೂ ಆಗಿದ್ದನು. ಇಂಥ ಆ ಹಬಸೀ ತರುಣನು ಕ್ರೋಧದಿಂದ ಸಂತಪ್ತನಾಗಿ ಕಿಲ್ಲೆಯ ಕಿಂಡಿಯನ್ನು ಸಮೀಪಿಸಲು, ನೇತಾಜಿಯು ದಂಡಿನವರೆಗೆ ಒಳ್ಳೇ ಹುರುಪು ಕೊಟ್ಟು, ಇಂದು ನಿಮ್ಮ ನಿಜವಾದ ಕ್ಷಾತ್ರತೇಜಸ್ಸನ್ನು ಪ್ರಕಟ ಮಾಡಬೇಕೆಂದು ಹೇಳಿದನು. ಮರಾಟರು 'ಹರಹರ ಮಹಾದೇವ' ಎಂದು ಗರ್ಜಿಸುತ್ತ, ಕಿಂಡಿಯಲ್ಲಿ ಕಾಲಿಟ್ಟವರನ್ನು ತುಂಡರಿಸಹತ್ತಿದರು; ಆದರೆ ಆ ಸಿದ್ದೀ ವೀರನು ತಾನೇ ಮುಂದರಿದು ಮರಾಟರ ಸಮಾಚಾರವನ್ನು ತಕ್ಕೊಳ್ಳ ಹತ್ತಿದನು. ಆತನು ಹತ್ತಿಪ್ಪತ್ತು ಜನರ ಖಡ್ಗದ ಪೆಟ್ಟುಗಳನ್ನು ಸಹ

ತನ್ನ ಢಾಲಿನ ಮೇಲೆ ತಕ್ಕೊಂಡು, ಮರಾಟರನ್ನು ಯಮಸದನಕ್ಕೆ ಅಟ್ಟ ಹತ್ತಿದನು. ಅವನ ಈ ರಾಕ್ಷಸೀ ಸಾಹಸವನ್ನು ನೋಡಿ ಮರಾಟರು ಬೆದರಿದರು. ಕೂಡಲೆ ನೇತಾಜಿಯು ಸಿಂಹನಂತೆ ಗರ್ಜಿಸುತ್ತ ಅಲ್ಲಿಗೆ ಬಂದು, ಮರಾಟರನ್ನು ಕುರಿತು:—"ವೀರರೇ, ನಾನು ಈ ಸಿದ್ದೀ ನಾಯಕನ ಸಮಾಚಾರವನ್ನು ತಕ್ಕೊಳ್ಳುತ್ತೇನೆ; ನೀವು ಉಳಿದವರನ್ನು ನೋಡಿಕೊಳ್ಳಿರಿ" ಎಂದು ನುಡಿದನು; ಮತ್ತು ಆ ವೀರನ ಮೈಮೇಲೆ ಏರಿ ಹೋದನು. ಎದುರಿಗೆ ಬಂದ ಈ ವೀರಮೂರ್ತಿಯನ್ನು ನೋಡಿ, ಆ ಸಿದ್ದೀನಾಯಕನು ಅತ್ಯಂತ ಸಂತಪ್ತನಾಗಿ, ಇವನೊಡನೆ ಯುದ್ಧ ವನ್ನು ಪ್ರಾರಂಭಿಸಿದನು. ಸಿದ್ದೀವೀರನು ಒಳ್ಳೇ ಆವೇಶದಿಂದ ನೇತಾ ಜಿಯ ಮೇಲೆ ಖಡ್ಗಪ್ರಯೋಗ ಮಾಡಿದನು. ನೇತಾಜಿಯು ಸ್ವಲ್ಪ ಅಜಾಗರೂಕನಾಗಿದ್ದರೆ, ಇವನ ದೇಹವು ಎರಡು ತುಂಡಾಗಿ ಬೀಳು ತ್ತಿತ್ತು; ಆದರೆ ಈತನು ಅತ್ಯಂತ ಕುಶಲನಾದ್ದರಿಂದ, ಆ ಸಿದ್ದಿಯ ಪೆಟ್ಟ ನ್ನು ತಪ್ಪಿಸಿಕೊಂಡು, ಅವನ ಮೊಣಕಾಲಿಗೆ ಒಂದು ಬಲವಾದ ಪೆಟ್ಟ ನ್ನು ಹಾಕಿದನು. ಆ ಹೊಡೆತದಿಂದ ಸಿದ್ದಿಯ ಕಾಲಿಗೆ ಬಲವಾದ ಗಾಯವಾಗಿ ನೆತ್ತರವು ಸುರಿಯಹತ್ತಿತು! ಆದರೂ ಆತನು ಒಳ್ಳೇ ಖಂಬೀರನಾದ್ದರಿಂದ ಅದನ್ನು ಲೆಕ್ಕಿಸದೆ, ನೇತಾಜಿಯ ಮೇಲೆ ಖಡ್ಗ ಪ್ರಯೋಗ ಮಾಡಿದನು. ಸುಮಾರು ಮುಕ್ಕಾಲು ತಾಸಿನ ವರೆಗೆ ಉಭಯತರಲ್ಲಿ ಘೋರವಾದ ಯುದ್ಧವು ನಡೆಯಿತು. ನೇತಾಜಿಯು ಎಷ್ಟು ಕುಶಲತನ ತೋರಿಸಿದರೂ, ಅವನ ಪೆಟ್ಟು ಸಿದ್ದಿಯ ಢಾಲಿನ ಮೇಲೆ ಯೇ ಬೀಳುತ್ತಿತ್ತು. ಸಿದ್ದಿಯೂ ಕೂಡ ಎಷ್ಟು ನೈಪುಣ್ಯವನ್ನು ತೋರಿಸಿದರೂ ಅವನ ಖಡ್ಗದ ಪೆಟ್ಟು ನೇತಾಜಿಯ ಢಾಲಿನ ಮೇಲೆಯೇ ಬೀಳುತ್ತಿತ್ತು. ಇವರ ಈ ಯುದ್ಧ ಚಮತ್ಕಾರವನ್ನು ನೋಡುತ್ತ ಉಭಯಪಕ್ಷದ ದಂಡಾಳುಗಳೂ ಗೊಂಬೆಗಳಂತೆ ನಿಂತುಬಿಟ್ಟರು. ಎಲ್ಲರ ದೃಷ್ಟಿಗಳು ಇವರಿಬ್ಬರ ಕಡೆಗೇ ತಿರುಗಿದವು. ಸಿದ್ದಿಯ ಕುಶಲತೆ ಯನ್ನು ನೋಡಿ ನೇತಾಜಿಯು ಆಗಾಗ್ಗೆ ಶಾಬಾಸ! ಎಂದು ನುಡಿಯುತ್ತಿ ದ್ದನು! ನೇತಾಜಿಯ ಗುಣವನ್ನು ಹೊಗಳುವಷ್ಟು ಉದಾರ ಬುದ್ಧಿಯು

ಸಿದ್ದೀವೀರನಲ್ಲಿರದ್ದರಿಂದ, ನೇತಾಜಿಯ ಕೌಶಲ್ಯವು ವ್ಯಕ್ತವಾದಂತೆ ಅವನು ಮತ್ತಿಷ್ಟು ಖತಿಗೊಳ್ಳಹತ್ತಿದನು. ಇಬ್ಬರೂ ಸಮಾನ ವೀರರು. ಇವರಲ್ಲಿ ಯಾರು ಬೀಳುವರೋ ಎಂದು ಎಲ್ಲರಿಗೂ ಕೌತುಕ ವಾಯಿತು. ಆಗ ನೇತಾಜಿಯು ಬಹಳ ಹೊತ್ತು ಹೀಗೆಯೇ ಇವನ ಸಂಗಡ ಕಾದಾಡುತ್ತ ನಿಲ್ಲುವದು ತರವಲ್ಲೆಂದು ತಿಳಿದು, ಒಳ್ಳೇ ಕುಶಲತೆಯಿಂದ ತನ್ನ ಢಾಲನ್ನು ಮುಂದೆ ಮಾಡಿ, ತನ್ನ ಪೆಟ್ಟು ಅವನ ಢಾಲಿಗೆ ಬೀಳದಂತೆ ಯುಕ್ತಿಯನ್ನು ಸಾಧಿಸಿ ಖಡ್ಗವನ್ನು ಪ್ರಯೋಗಿಸಿದನು. ಆ ಪ್ರಯೋಗವು ತಪ್ಪದೆ ಉಪಯೋಗವಾಗಿ, ಅದರಿಂದ ಸಿದ್ಧಿಯು ಎರಡು ತುಂಡಾಗಿ ಬಿದ್ದನು! ಮುಸಲ್ಮಾನರಲ್ಲಿ ಹಾ ಹಾಕಾರ ವೆದ್ದಿತು; ಆದರೂ ಉಳಿದ ಮುಸಲ್ಮಾನರು ಸಂತಾಪದಿಂದ ಮರಾಟರ ಮೇಲೇರಿ ಬಂದರು. ಈ ಸುದ್ದಿಯು ಗುಡ್ಡದ ಕೆಳಗಿರುವ ಮುಸಲ್ಮಾನರ ದಂಡಿಗೆ ಹತ್ತಿತು; ಆ ಕೂಡಲೆ ಅಸಂಖ್ಯ ಜನ ಮುಸಲ್ಮಾನ ವೀರರು ಗುಡ್ಡವನ್ನು ಏರಿ ಬರಹತ್ತಿದರು. ಪ್ರಚಂಡ ಸೇನೆಯು ಮೇಲೆ ಬರಹತ್ತಿದನ್ನು ನೋಡಿ, ನೇತಾಜಿಯು ಕಿಲ್ಲೇದಾರನಿಗೆ ಸೂಚನೆ ಕಳಿಸಿದನು; ಮತ್ತು ಎಲ್ಲ ಸಾಮಾನುಗಳು ಬಾಲೆಕಿಲ್ಲೆಯನ್ನು ಮುಟ್ಟುವವರೆಗೆ ಮುಸಲ್ಮಾನರು ಎಷ್ಟು ಜನರು ಬಂದರೂ ತುಂಡರಿಸಿ ಚಲ್ಲಬೇಕೆಂದು ತನ್ನ ಸೈನಿಕರಿಗೆ ಅಪ್ಪಣೆ ಮಾಡಿದನು. ಮಹಾ ಬಲಿಷ್ಠನಾದ ಸಿದ್ದಿಯನ್ನು ಕೊಂದದ್ದರಿಂದ, ನೇತಾಜಿಯ ವಿಷಯವಾಗಿ ಎಲ್ಲ ಮರಾಟರೂ ಪೂಜ್ಯಬುದ್ಧಿಯನ್ನು ತಾಳಿದ್ದರು. ಅದ್ದರಿಂದ ಅವರು ಒಳ್ಳೇ ಹುರುಪಿನಿಂದ ಮುಸಲ್ಮಾನರ ಚಂಡುಗಳನ್ನು ಹರಿಗಡಿಯಲಾರಂಭಿಸಿದರು. ಸುಮಾರು ಎರಡು ತಾಸಿನ ವರೆಗೆ ಅವರು ಮುಸಲ್ಮಾನರನ್ನು ತಡೆದರು. ಅಷ್ಟೊತ್ತಿಗೆ ಎಲ್ಲ ಪರಿವಾರವೂ ಬಾಲೆಕಿಲ್ಲೆಯಲ್ಲಿ ಭದ್ರವಾಗಿ ಸೇರಿಕೊಂಡಿತೆಂಬ ಸೂಚನೆಯು ಬರಲು, ನೇತಾಜಿಯು ತನ್ನ ಸೈನಿಕರಿಗೆ ಸಂಜ್ಞೆಯನ್ನು ಮಾಡಿದನು. ಕ್ಷಣದಲ್ಲಿ ಒಬ್ಬ ಮರಾಟನೂ ಅಲ್ಲಿ ಉಳಿಯಲಿಲ್ಲ. ಮರಾಟರ **ಗನೀಮೀ ಕಾವಾ** ಪದ್ಧತಿಯ ಅನುಭವವಿದ್ದ ಮುಸಲ್ಮಾನರು ಮುಂದಕ್ಕೆ ಬರಲು ಅಂಜಿದರು. ಇವರಲ್ಲಿ ಏನು ಮೋಸ

ವಿರುವದೋ, ಎಂದು ಅವರು ತಿಳಿದರು. ಬಳಿಕ ಅವರು ಕಿಲ್ಲೆಯ ಮೂರು ಭಾಗಗಳಲ್ಲಿಯೂ ಕೊಳ್ಳಿಯನ್ನಿಟ್ಟರು. ಮೂರು--ನಾಲ್ಕು ಕಡೆಗೆ ಕಿಲ್ಲೆಗೆ ಖಿಂಡಿಯನ್ನು ಕೆಡವಿ ಒಳಗೆ ಸೇರಿದರು. ಆಗ ಅವರಿಗೆ ಕಿಲ್ಲೆಯ ಮೇಲೆ ಒಬ್ಬ ಮರಾಟನೂ ಕಂಡು ಬರಲಿಲ್ಲ; ಇಷ್ಟೇ ಅಲ್ಲ, ಒಂದು ಕವಡಿಯು ಕೂಡ ಅವರಿಗೆ ದೊರೆಯಲಿಲ್ಲ. ಎಲ್ಲರೂ ಗೋವರ್ಧನ ಅಥವಾ ಮನೋಹರ ಬಾಲೆಕಿಲ್ಲೆಯನ್ನು ಸೇರಿಕೊಂಡಿರಬಹುದೆಂಬ ಕಲ್ಪನೆಯು ಅವರಲ್ಲಿ ಸಹಜವಾಗಿ ಉದ್ಭವಿಸಿತು. ಇಷ್ಟೊತ್ತಿನವರೆಗೆ ನಾವು ಸುಮ್ಮನೆ ಶ್ರಮಬಟ್ಟೆವು; ವ್ಯರ್ಥವಾಗಿ ಮದ್ದು-ಗುಂಡುಗಳನ್ನು ಹಾಳುಮಾಡಿಕೊಂಡೆವು, ಎಂಬ ಪಶ್ಚಾತ್ತಾಪವು ಅವರಿಗೆ ಉಂಟಾಯಿತು.

---

## ಪಲಾಯನ.

○ ○ ○ ○

ಮುಸಲ್ಮಾನರು ಕಿಲ್ಲೆಯನ್ನು ಪ್ರವೇಶ ಮಾಡಿದಾಗ, ಸಂಜೆಯ ಐದು ಗಂಟೆಯ ಸಮಯವಾಗಿತ್ತು. ಮರಾಟರು ತೆರವು ಮಾಡಿಟ್ಟು ಹೋದ ಆ ಸ್ಥಳವನ್ನು ಅವರು ಆಕ್ರಮಿಸಿದರು. ಸಂಜೆಯ ಆರು ಗಂಟೆಯ ಒಳಗಾಗಿ ಮುಸಲ್ಮಾನರ ಎಲ್ಲ ಸೈನ್ಯವು ಕಿಲ್ಲೆಯನ್ನು ಸೇರಿತು. ಅಲ್ಲಿ ಅವರು ತಮ್ಮ ತಳವನ್ನು ಊರಿ, ಗೋವರ್ಧನ ಬಾಲಕಿಲ್ಲೆಗೆ ತೋಫು ಹೂಡುವ ಎತ್ತುಗಡೆ ನಡೆಸಿದರು.

ರಾಜಮಾಚಿಯ ಪೂರ್ವಕ್ಕೆ ಒಂದು ಪ್ರಚಂಡ ಪರ್ವತದ ಶ್ರೇಣಿಯಿರುತ್ತದೆ. ಆ ಶ್ರೇಣಿಯ ಒಂದು ಭಾಗದಲ್ಲಿ ಆರುನೂರು ಮೊಳ ಎತ್ತರವಿರುವ ಒಂದು ಪ್ರಚಂಡವಾದ ಕೋಡಗಲ್ಲು ಇರುವದು. ಈ ಕೊಡಗಲ್ಲಿನ ಮೇಲೆ ಒಳ್ಳೇ ಕುಶಲತೆಯಿಂದ ಶ್ರೀವರ್ಧನ ಕಿಲ್ಲೆಯು ಕಟ್ಟಲ್ಪಟ್ಟಿರುವದು. ಈ ಕೋಡಗಲ್ಲು ಒಳ್ಳೇ ನೀಟಾಗಿದ್ದದರಿಂದ, ಗಂಡಾಂತರ ಬಂದಾಗ ಅಲ್ಲಿ ಇರುವದಕ್ಕೋಸ್ಕರ ರಾಜಮಾಚಿಯ ಕಿಲ್ಲೆ

ಯು ನಿವಾಸಿಗಳ ಸಲುವಾಗಿ ಈ ಬಾಲೆಕಿಲ್ಲೆಯು ಕಟ್ಟಲ್ಪಟ್ಟಿರುವದು. ಮುಸಲ್ಮಾನರ ಎಂಥ ತೋಫಿಗೂ ನಿಸರ್ಗಸಿದ್ಧವಾದ ಈ ಕಿಲ್ಲೆಯು ಹಣಿಯುವಹಾಗಿದ್ದಿಲ್ಲ. ಕಿಲ್ಲೆಯ ಮೇಲೆ ಮೂರು-ನಾಲ್ಕು ನೀರಿನ ಝರಿಗಳಿದ್ದದರಿಂದ, ಒಳಗಿನವರಿಗೆ ನೀರಿನ ತಾಪತ್ರಯವಿದ್ದಿಲ್ಲ. ಅಲ್ಲಿ ಆಹಾರ ಸಾಮಗ್ರಿಯಾದರೂ ವಿಶೇಷವಾಗಿತ್ತು. ಆದ್ದರಿಂದ ಶಿವಾಜಿಯಿಂದ ಸಹಾಯಕ ದಂಡು ಬರುವವರೆಗೆ ಈ ಕಿಲ್ಲೆಯಲ್ಲಿಯೇ ಇದ್ದುಕೊಂಡು, ಮುಸಲ್ಮಾನರೊಡನೆ ಕಾದಬೇಕೆಂದು ಮರಾಟರು ನಿಶ್ಚಯ ಮಾಡಿದ್ದರು; ಆದರೆ ಸುತ್ತಲೂ ಮುಸಲ್ಮಾನರ ದಂಡು ಬೀಡು ಬಿಟ್ಟಿದ್ದರಿಂದ ಶಿವಾಜಿಗೆ ಸುದ್ದಿಹೇಳಲಿಕ್ಕೆ ಹೇಗೆ ಹೋಗಬೇಕೆಂಬ ಪ್ರಶ್ನೆಯು ಎಲ್ಲರ ಮುಂದೂ ಬಂದು ನಿಂತಿತು. ಪ್ರತ್ಯಕ್ಷ ಮುಸಲ್ಮಾನರ ದಂಡಿನಲ್ಲಿ ಹಾಯ್ದು ಹೋಗುವ ಧೈರ್ಯವು ಅದಾರಿಗೆ ಆಗಬೇಕು? ತ್ರ್ಯಂಬಕ ರಾಯನು ಎಲ್ಲರನ್ನೂ ವಿಚಾರಿಸಿದನು; ಆದರೆ ಅದಕ್ಕೆ ಯಾರೂ ಒಪ್ಪಲಿಲ್ಲ. ಕೊನೆಗೆ ನೇತಾಜಿಗೆ ಈ ಸುದ್ದಿಯು ತಿಳಿಯಿತು. ಕೂಡಲೆ ಅವನು ಕಿಲ್ಲೆದಾರನ ಬಳಿಗೆ ಬಂದು, ನನಗೆ ಅಪ್ಪಣೆಯಾದರೆ ಶಿವಾಜಿಯ ಕಡೆಗೆ ಹೋಗಿ ಬರುತ್ತೇನೆ, ಎಂದು ನುಡಿದನು. ಕಿಲ್ಲೆದಾರನಿಗೂ ನೇತಾಜಿಯನ್ನು ಕಳಿಸಿ ಕೊಡುವದೇ ಬೇಕಾಗಿತ್ತು. ಯಾಕಂದರೆ ಪ್ರಕೃತ ಒದಗಿದ ಯುದ್ಧದಲ್ಲಿ ನೇತಾಜಿಯ ಕೈಯೇ ಮೇಲಾದ್ದರಿಂದ, ಕಿಲ್ಲೆಯೊಳಗಿನ ಎಲ್ಲ ಸೈನಿಕರೂ ನೇತಾಜಿಗೆ ಬಹುಮಾನವನ್ನು ಕೊಟ್ಟು ಕಿಲ್ಲೆದಾರನನ್ನು ತಿರಸ್ಕರಿಸಿಬಿಟ್ಟಿದ್ದರು. ಆದ್ದರಿಂದ ದುರಭಿಮಾನೀ ಸ್ವಭಾವದ ತ್ರ್ಯಂಬಕಜಿಗೆ ಅದು ಸಹನವಾಗದಂತಾಗಿತ್ತು. ಆದ್ದರಿಂದ ಅವನು ನೇತಾಜಿಯನ್ನು ಹೇಗಾದರೂ ಮಾಡಿ ಕಿಲ್ಲೆಯನ್ನು ಬಿಡಿಸಿ ಹೊರಗೆ ಕಳಿಸಬೇಕಾಗಿತ್ತು. ಯಾಕಂದರೆ ಮುಸಲ್ಮಾನರು ಒಂದು ವರುಷದವರೆಗೆ ಮುತ್ತಿಗೆಯನ್ನು ಹಾಕಿದರೂ, ಅವರಿಂದ ಮರಾಟರಿಗೆ ಯಾವ ಅಪಾಯವೂ ಆಗುವ ಹಾಗಿದ್ದಿಲ್ಲ. ಆದ್ದರಿಂದ ನೇತಾಜಿಯ ಅವಶ್ಯಕತೆಯು ಇನ್ನು ಅವನಿಗೆ ಉಳಿದಿರಲಿಲ್ಲ. ತಿರುಗಿ ಅವನಿಂದ ತನ್ನ ಗೌರವಕ್ಕೆ ಕುಂದು ಬರುವದೆಂದೇ ಆವನು ತಿಳಿದಿದ್ದನು. ಅನಾ

ಯಾಸವಾಗಿ ನೇತಾಜಿಯೇ ಈ ಪ್ರಸ್ತಾಪ ತೆಗೆದದ್ದರಿಂದ, ಆತನು ಆನಂದದಿಂದ ಅವನಿಗೆ ಅಪ್ಪಣೆ ಕೊಟ್ಟನು.

ನೇತಾಜಿಯು ಶಿವಾಜಿಯ ಬೆಟ್ಟಿಗೆ ಹೋಗುವದಕ್ಕೋಸ್ಕರ ಅಪ್ಪಣೆ ತೆಗೆದುಕೊಳ್ಳಲು, ಎಲ್ಲ ಮರಾಟರಿಗೂ ಆಶ್ಚರ್ಯವೆನಿಸಿತು. ಆತನ ಧೈರ್ಯಕ್ಕೆ ಎಲ್ಲರೂ ಬೊಟ್ಟು ಕಚ್ಚಿದರು! ಬಳಿಕ ನೇತಾಜಿಯು ಮುಸಲ್ಮಾನರ ದಂಡಿನಲ್ಲಿ ಹೇಗೆ ಹಾದು ಹೋಗಬೇಕೆಂದು ಯೋಚಿಸಿ, ಮುಸಲ್ಮಾನ ಸರದಾರನ ವೇಷದಿಂದಲೇ ಹೋಗಬೇಕೆಂದು ನಿರ್ಧರಿಸಿದನು. ಅವನ ಬಳಿಯಲ್ಲಿ ಹೇಗೂ ಆಯೂಬಖಾನನ ಪೋಷಾಕು ಇದ್ದೇ ಇದ್ದುದರಿಂದ, ನೇತಾಜಿಯು ಆಗ ಅದರ ಉಪಯೋಗ ಮಾಡಿಕೊಂಡನು. ಅವನು ಮೈಯಲ್ಲಿ ಚಿಲಖತ್ತನ್ನು ಏರಿಸಿ, ಮೇಲೆ ಆಯೂಬಖಾನನ ಪೋಷಾಕನ್ನು ಧರಿಸಿದನು. ಅದರಿಂದ ಅವನು ಮುಸಲ್ಮಾನರ ಒಬ್ಬ ದೊಡ್ಡ ಸರದಾರನಂತೆ ತೋರಹತ್ತಿದನು. ಬಳಿಕ ಅವನು ತನ್ನ ಖಡ್ಗ ಮೊದಲಾದ ಶಸ್ತ್ರಾಸ್ತ್ರಗಳನ್ನು ತಕ್ಕೊಂಡು ಆಯೂಬಖಾನನ ಭೆಟ್ಟಿಗೆ ಹೋದನು. ಆ ಖಾನನನ್ನು ಒಂದು ಸಾಧಾರಣ ಕೋಣೆಯಲ್ಲಿ ಪ್ರತಿಬಂಧಿಸಿ ಇಟ್ಟಿದ್ದರು. ಅವನು ನೇತಾಜಿಯನ್ನು ಕಂಡ ಕೂಡಲೆ ಸಂತಾಪದಿಂದ:—"ನೇತಾಜಿ, ಲಕ್ಷ್ಯದಲ್ಲಿಡು; ನೀನು ವಿಜಾಪುರದ ಬಾದಶಹನ ಬೀಗನನ್ನು ಸೆರೆಯಲ್ಲಿಟ್ಟಿರುತ್ತೀ ಎಂಬದನ್ನು! ಬಾದಶಹನಿಗೆ ಈ ಸುದ್ದಿಯು ಹತ್ತಿದರೆ, ಆತನು ನಿಮ್ಮ ಎಲ್ಲ ಮರಾಟರ ಚಂಡುಗಳನ್ನು ಈಡಾಡದೆ ಬಿಡಲಾರನು." ಎಂದು ನುಡಿದನು. ಆಯೂಬಖಾನನ ಈ ಮಾತುಗಳನ್ನು ಕೇಳಿ ನೇತಾಜಿಗೆ ನಗೆ ಬಂದಿತು; ಆದರೂ ಅವನು ಆ ನಗೆಯನ್ನು ಖಾನನಿಗೆ ತೋರಗೊಡದೆ: "ಖಾನಸಾಹೇಬರೇ, ಹೀಗೆ ಸಿಟ್ಟಿಗೇಳಬೇಡಿರಿ. ನಿಮ್ಮನ್ನು ಸೆರೆಯಲ್ಲಿಟ್ಟದ್ದು ನನ್ನಿಂದ ದೊಡ್ಡ ತಪ್ಪಾಗಿದೆ ನಿಮ್ಮನ್ನು ಸೆರೆಯಲ್ಲಿಟ್ಟದ್ದರಿಂದಲೇ ನಮ್ಮ ರಾಜಮಾಚಿಯ ಕಿಲ್ಲೆಯು ಮುಸಲ್ಮಾನರ ವಶವಾಯಿತು. ಈ ಬಗ್ಗೆ ಮರಾಟರೂ ನನಗೆ ಸಿಟ್ಟು ಮಾಡುತ್ತಿರುವರು. ಆದ್ದರಿಂದ ಈಗ ನಾನು ನಿಮ್ಮ ಬಿಡುಗಡೆಯ ಸಲುವಾಗಿ ಒಡಂಬಡಿಕೆ

ಮಾಡಿಕೊಳ್ಳುವದಕ್ಕೆಂದು ನಿಮ್ಮ ಮುಸಲ್ಮಾನರ ಛಾವಣಿಗೆ ಹೋಗ ತಕ್ಕವನಿದ್ದೇನೆ'' ಎಂದು ನುಡಿದು, ಅವನ ಮನಸ್ಸನ್ನು ಒಲಿಸಿಕೊಂಡು, ಅವರ ಸೇನಾಪತಿ ಯಾರು? ದಂಡಿನಲ್ಲಿ ಉಪಯೋಗಿಸತಕ್ಕ ಸಾಂಕೇತಿಕ ಚಿಹ್ನವಾವುದು? ಎಂಬ ಸಂಗತಿಗಳನ್ನು ಕೇಳಿಕೊಂಡನು. ನೇತಾಜಿಯು ಸವಿಮಾತಿನ ಮಬ್ಬಿಗೆ ಬಿದ್ದ ಆ ಖಾನನು ಎಲ್ಲ ಸಂಗತಿಗಳನ್ನೂ ಹೇಳಿದನು. ನೇತಾಜಿಯು ತನ್ನ ಕೆಲಸವಾಯಿತೆಂದು ಬಗೆದು, ಖಾನನಿಗೆ ಒಂದು ಸಲಾಮು ಮಾಡಿ ಅಲ್ಲಿಂದ ಹೊರಬಿದ್ದನು.

ನೇತಾಜಿಯು ಖಾನನ ಕೋಣೆಯಿಂದ ಹೊರಬಿದ್ದಾಗ ಕತ್ತಲೆಯು ಮುಚ್ಚಿ ಹಾಕಿತ್ತು. ಕಿಲ್ಲೆಯನ್ನಿಳಿಯುವದಕ್ಕೆ ಇದೇ ಸಮಯವೆಂದು ತಿಳಿದು, ಆತನು ಹೆಬ್ಬಾಗಿಲ ಬಳಿಗೆ ಬಂದು, ಬಹು ಅಸ್ತವ್ಯಸ್ತವಾಗಿರುವ ಪಾವಟಿಗೆಗಳ ಮೇಲಿಂದ ಸರಸರನೆ ಕಿಲ್ಲೆಯನ್ನಿಳಿದು ನೆಟ್ಟಗೆ ಮುಸಲ್ಮಾನರ ಛಾವಣಿಯ ಮಧ್ಯಭಾಗಕ್ಕೆ ಹೋದನು. ಛಾವಣಿಯು ತುಂಬ ಹಿಲಾಲುಗಳನ್ನು ಹಚ್ಚಿ ಬೆಳಕು ಮಾಡಿದ್ದರು. ದಂಡಾಳುಗಳಿಗೆ ಆ ದಿನ ಹಗಲೆಲ್ಲ ಶ್ರಮವಾಗಿದ್ದದರಿಂದ, ಎಲ್ಲ ಕಡೆಗಳ ಸಿಪಾಯಿಗಳೂ ವಿಶ್ರಾಂತಿಯನ್ನು ಹೊಂದುತ್ತಿದ್ದರು. ಕೆಲವರು ದೊಡ್ಡ ದೊಡ್ಡ ಕೆಚ್ಚುಗಳನ್ನು ಮಾಡಿ ದಂಡಿನವರಿಗೆ ರೊಟ್ಟಿಗಳನ್ನು ಸುಡುತ್ತಿದ್ದರು. ನೇತಾಜಿಯು ಒಳ್ಳೇ ಡೌಲಿನಿಂದ ಜನರ ಗುಂಪಿನೊಳಗಿಂದಲೇ ಹಾಯ್ದು ನಡೆದನು. ಯಾವನೋ ಒಬ್ಬ ಮುಸಲ್ಮಾನ ದೊಡ್ಡ ಅಧಿಕಾರಿಯು ಪಹರೆಯನ್ನು ನೋಡ ಹೊರಟಿರುವನೆಂದು ತಿಳಿದು, ಪಹರೆಯವರೂ ದಂಡಾಳುಗಳೂ ಆತನಿಗೆ ಲಷ್ಕರೀ ಪದ್ಧತಿಯಿಂದ ಸಲಾಮುಗಳನ್ನು ಅರ್ಪಿಸಹತ್ತಿದರು. ನೇತಾಜಿಯು ಅವರ ಸಲಾಮುಗಳನ್ನು ತಕ್ಕೊಳ್ಳುತ್ತ, ಸೈನಿಕರು ವಿರಲವಾಗಿರುವ ನಿಟ್ಟನ್ನು ಹಿಡಿದು ನಡೆದನು. ಕಡೆಯ ಉಕ್ಕಡದ ಕಾವಲುಗಾರರೂ ಸಲಾಮು ಮಾಡಿ ಸರಿದು ನಿಂತರು. ಹೀಗೆ ನಿರ್ವಿಘ್ನವಾಗಿ ಆ ಛಾವಣಿಯಿಂದೊಮ್ಮೆ ಪಾರಾಗಿ, ಕತ್ತಲಲ್ಲಿ ಸೇರಿ, ಆತನು ಯಾರಿಗೂ ಕಾಣದಂತಾದನು.



# ನೇತಾಜಿ ಪಾಲ್ಕರ.

ಈ ಮೇರೆಗೆ ಮುಸಲ್ಮಾನ ಛಾವಣಿಯ ಕಾವಲುಗಾರರ ಕಣ್ಣಿಗೆ ಇಂಗು ಹಚ್ಚಿ ಸುರಕ್ಷಿತವಾಗಿ ಪಾರಾದ ನೇತಾಜಿಯು ಕತ್ತಲಲ್ಲಿ ಗುಡ್ಡವನ್ನಿಳಿದು, ದಾರಿ ಗೊತ್ತಿಲ್ಲದ್ದರಿಂದ ಮುಂದೆ ಏನು ಮಾಡಬೇಕೆಂದು ಯೋಚಿಸತೊಡಗಿದನು. ಅವನಿಗೆ ಲೋಹಗಡದ ಮಾರ್ಗವು ಗೊತ್ತಿರಲಿಲ್ಲ. ರಾಮಜಿಯ ಗುಡಿಸಲಿಗೆ ಹೋಗಬೇಕಾದರೆ, ಖಂಡಾಳೆಯ ಘಟ್ಟವನ್ನಿಳಿದು ಹೋಗಬೇಕಾಗುತ್ತಿತ್ತು. ಅದರ ಮಾರ್ಗವು ಅವನಿಗೆ ಗೊತ್ತಿದ್ದಿಲ್ಲ. ಆದ್ದರಿಂದ ಅವನು ಹಾಗೆಯೇ ಒಂದೆರಡು ಮೈಲುಗಳ ವರೆಗೆ ಆ ಗುಡ್ಡದ ಓರೆಯಲ್ಲಿ ನಡೆದು, ಬೆಳಗಾಗುವ ವರೆಗೆ ಒಂದು ಗಿಡದ ಬುಡಕ್ಕೆ ಹೋಗಿ ಕುಳಿತುಕೊಂಡನು. ಯಾವಾಗ ಶಿವಾಜಿ ಮಹಾರಾಜರನ್ನು ಕಾಣುವೆನೋ ಎಂಬ ಕುತೂಹಲವು ಅವನಲ್ಲಿ ವಿಶೇಷವಾಗಿದ್ದದರಿಂದ, ಅವನು ಬೆಳಗಾಗುವ ದಾರಿಯನ್ನೇ ನೋಡುತ್ತಿದ್ದನು. ಬರಬರುತ್ತ ರಾತ್ರಿಯು ಸರಿದು, ಪೂರ್ವದಿಶೆಯು ಕೆಂಬಣ್ಣವನ್ನು ಧರಿಸಿತು. ಆಗ ನೇತಾಜಿಯು ಎದ್ದು ಮಾರ್ಗವನ್ನು ಹಿಡಿದನು. ಮುಂದೆ ಸ್ವಲ್ಪ ಹೊತ್ತಿನಲ್ಲೇ ಬೆಳ್ಳಗೆ ಬೆಳಗಾಯಿತು. ಯಾರಾದರೂ ದಾರಿಕಾರರು ಕೂಡುವರೇನೆಂದು ನೇತಾಜಿಯು ಸುತ್ತಲೂ ನೋಡುತ್ತ ನಡೆದನು. ಮುಂದೆ ಅವನಿಗೆ ಒಂದು ಸಣ್ಣ ಹಳ್ಳವು ಹತ್ತಿತು. ಆ ಹಳ್ಳದಲ್ಲಿ ಮನುಷ್ಯರ ಸುಳುವು ಕಾಣುವದೇನೆಂದು ದೂರದ ವರೆಗೆ ನೋಡಿದನು. ಆಗ ಅಲ್ಲಿ ಅವನಿಗೆ ಮನುಷ್ಯರ ಧ್ವನಿಯು ಕೇಳಿಸಿತು. ಕೂಡಲೆ ಅವನು ದಂಡೆಯನ್ನು ಹತ್ತಿ ನೋಡಿದನು. ಆ ಮನುಷ್ಯರನ್ನು ಕಂಡು ಅವನಿಗೆ ಆನಂದವಾಗುವದರ ಬದಲು, ವಿಲಕ್ಷಣ ಸಂತಾಪವಾಯಿತು. ಪರರ ಸಂಕಟವನ್ನು ನೋಡಿ ಆತನಿಗೆ ಅತ್ಯಂತ ದುಃಖವಾಗುತ್ತಿತ್ತು. ಆದ್ದರಿಂದ ಅವನು ಯಾರಾದರೂ ದುಃಖದಲ್ಲಿ ಬಿದ್ದಿದ್ದರೆ, ಅವರನ್ನು ದುಃಖಮುಕ್ತರನ್ನಾಗಿ ಮಾಡಲಿಕ್ಕೆ ತನ್ನ ದೇಹದ ಪರವಿಯನ್ನೇ ಬಿಟ್ಟುಬಿಡುತ್ತಿದ್ದನು. ಈ ಸ್ವಭಾವವೇ

ಆವನಿಗೆ ವೈಯುಂಡು ಹೋಗಿತ್ತು. ಈ ದಿನವೂ ಅತನಿಗೆ ಅಂಥ ಪ್ರಸಂಗವೇ ಒದಗಿತು.

ಇಬ್ಬರು ಮುಸಲ್ಮಾನ ಸ್ವಾರರು ಹುಲ್ಲಿನ ಹೊರೆ ಹೊತ್ತು ಕೊಂಡು ಹೋಗುವ ಇಬ್ಬರು ಮರಾಟರನ್ನು ಅತ್ಯಂತ ನಿಷ್ಠುರತನ ದಿಂದ ತಮ್ಮ ಕುದುರೆಯ ಮುಂದೆ ಓಡಹಚ್ಚಿದ್ದರು; ಹಾಗು ನಡು ನಡುವೆ ಕೋರಡೆಯಿಂದ ಅವರನ್ನು ಹೊಡೆಯುತ್ತಿದ್ದರು. ಅವರ ಮೇಲಿನ ಈ ಬಲುಮೆಯನ್ನು ನೋಡಿ ನೇತಾಜಿಗೆ ಸಂತಾಪವಾಯಿತು. ಕೂಡಲೆ ಅವನು ಆ ಸ್ವಾರರ ಬಳಿಗೆ ಧಾವಿಸಿ ಹೋಗಿ, ಒಬ್ಬ ಸ್ವಾರನ ಕೈಹಿಡಿದು ಜಗ್ಗಿ ನೆಲಕ್ಕೆ ಕೆಡವಿ, ಅವನ ಸೊಂಟಕ್ಕೆ ಬಲವಾದ ಪೆಟ್ಟನ್ನು ಹಾಕಿದನು. ಆಕಸ್ಮಿಕವಾಗಿ ಒದಗಿದ ಈ ಪ್ರಸಂಗದಿಂದ ಇನ್ನೊಬ್ಬ ಸ್ವಾರನು ಸಂತಾಪಗೊಂಡು, ನೇತಾಜಿಯ ಮೇಲೆ ಭಲ್ಲೆಯನ್ನು ಪ್ರಯೋ ಗಿಸ ಹೋದನು; ಆದರೆ ನೇತಾಜಿಯು ಚಪಲತೆಯಿಂದ ಅದನ್ನು ತಪ್ಪಿಸಿಕೊಂಡು, ಕೆಳಗೆ ಬಿದ್ದ ಸ್ವಾರನ ಕುದುರೆಯನ್ನೇರಿ ಪ್ರತಿಸ್ಪರ್ಧಿ ಯಾದ ಇನ್ನೊಬ್ಬ ಸ್ವಾರನ ಮೇಲೆ ಸಾಗಿ ಹೋದನು. ಅಷ್ಟರಲ್ಲಿ ಹೊರೆ ಹೊತ್ತುಕೊಂಡಿದ್ದ ಆ ಇಬ್ಬರೂ ಮರಾಟರು ಹೊರೆಗಳನ್ನು ಚೆಲ್ಲಿ ಕೊಟ್ಟು, ನೆಲಕ್ಕೆ ಬಿದ್ದ ಸ್ವಾರನು ಮೇಲಕ್ಕೇಳದಂತೆ ಬಿಗಿದು ಕಟ್ಟಿ, ಅವನ ಖಡ್ಗ-ಭಲ್ಲೆಗಳನ್ನು ತಕ್ಕೊಂಡು, ನೇತಾಜಿಗೆ ಸಹಾಯ ಮಾಡುವ ದಕ್ಕಾಗಿ ಇನ್ನೊಬ್ಬ ಸ್ವಾರನ ಮೇಲೆ ಸಾಗಿ ಹೋದರು. ಹೀಗೆ ಮೂವರೂ ಕೂಡಿ ತನ್ನ ಮೇಲೇರಿ ಬರಲು, ಆ ಸ್ವಾರನು ಹೆದರಿ ಓಡಿ ಹೋಗುವ ಎತ್ತುಗಡೆ ಮಾಡಿದನು; ಆದರೆ ನೇತಾಜಿಯು ತನ್ನ ಕೈಯೊಳ ಗಿನ ಭಲ್ಲೆಯಿಂದ ಗುರಿ ನೋಡಿ ಹೊಡೆಯಲು, ಅದು ತಪ್ಪದೆ ಆ ಸ್ವಾರನ ಬೆನ್ನಲ್ಲಿ ನೆಟ್ಟಿತು. ಕೂಡಲೆ ಸ್ವಾರನು ನೆಲಕ್ಕೆ ಬಿದ್ದು ಪ್ರಾಣ ಬಿಟ್ಟನು!

ಇಷ್ಟೊತ್ತಿನವರೆಗೆ ಆ ಮರಾಟರಿಗೂ, ನೇತಾಜಿಗೂ ಮಾತು-ಕಥೆ ಗಳಾಗಿದ್ದಿಲ್ಲ. ಈ ರೀತಿ ಅವರು ಶತ್ರುಗಳನ್ನು ಸಂಹರಿಸಿ, ನಿರ್ಭಯ ರಾಗಲು, ಮರಾಟರು ನೇತಾಜಿಗೆ ರಾಮ ರಾಮ ಮಾಡಿ:—"ಮಹಾ

ರಾಜ, ತಾವು ಇಂದು ಅನಾಯಾಸವಾಗಿ ದೇವರೇ ಬಂದಂತೆ ಬಂದಿರಿ. ಇಲ್ಲದಿದ್ದರೆ ಈ ಟೊಣಪರು ನಮ್ಮನ್ನು ಛಾವಣಿಗೆ ಒಯ್ದು ಗೋಳಾಡಿ ಸುತ್ತಿದ್ದರು'' ಎಂದು ನುಡಿದು, ಆತನ ಉಪಕಾರವನ್ನು ಸ್ಮರಿಸಿದರು. ಆಗ ನೇತಾಜಿಯು ಅವರನ್ನು ಕುರಿತು:—''ಪಾಟೀಲರೇ, ಇದಾವ ದೊಡ್ಡ ಕೆಲಸ? ಇದಕ್ಕಾಗಿ ನನ್ನ ಉಪಕಾರವನ್ನು ಸ್ಮರಿಸುವ ಕಾರಣ ವಿಲ್ಲ. ನನ್ನ ಕರ್ತವ್ಯವನ್ನು ನಾನು ಮಾಡಿದೆನು. ನೀವು ಇವರ ಕೈಯಲ್ಲಿ ಹೇಗೆ ಸಿಕ್ಕಿರಿ?'' ಎಂದನು. ಆಗ ಆ ಮರಾಟರು:—''ಮಹಾ ರಾಜ, ನಾವು ಇಲ್ಲಿಯೇ ಸಮೀಪದ ಹಳ್ಳಿಯವರು. ನಮ್ಮ ದನ-ಕರು ಗಳಿಗಾಗಿ ಹುಲ್ಲು ಹೊತ್ತುಕೊಂಡು ಹೋಗುತ್ತಿದ್ದೆವು. ಅಷ್ಟರಲ್ಲಿ ಈ ಮುಸಲ್ಮಾನರು ಬಂದು ನಮ್ಮನ್ನು ಹೋಗಗೊಡದೆ, ತಮ್ಮ ಛಾವಣಿ ಯ ಕಡೆಗೆ ಒಯ್ಯಹತ್ತಿದರು. ಮಹಾರಾಜ, ಈ ಹೊರೆಯನ್ನು ಹೊತ್ತುಕೊಂಡು ಕುದುರೆಯ ಮುಂದೆ ಓಡುವದಾದೀತೇ? ಹಾಗೆ ಓಡದಿದ್ದರೆ, ಈ ರಾಕ್ಷಸರು ಕೋರಡೆಯಿಂದ ಹೊಡೆಯುವರು. ನಿಮ್ಮ ಪುಣ್ಯದಿಂದಲೇ ಇಂದು ನಾವು ಈ ಸಂಕಟದಿಂದ ಮುಕ್ತರಾದಂತಾ ಯಿತು. ಮಹಾರಾಜ, ತಾವು ಯಾರು? ಶಿವಾಜಿಮಹಾರಾಜರ ಕಡೆ ಯವರೇನು?'' ಎಂದು ಕೇಳಿದರು.

ಆಗ ನೇತಾಜಿಯು:—''ಹೌದು. ನಾನು ಶಿವಾಜಿಮಹಾರಾಜರ ಭೆಟ್ಟಿಗೆ ಹೊರಟಿದ್ದೇನೆ. ಲೋಹಗಡದ ಮಾರ್ಗವು ನಿಮಗೆ ಗೊತ್ತಿ ರುವದೇನು?''

ಪಾಟೀಲರಲ್ಲಿ ಒಬ್ಬನು:—''ಮಹಾರಾಜ, ಗೊತ್ತಿದೆ. ನನಗೂ ಮರಾಟರ ದಂಡಿನಲ್ಲಿ ಸೇರಬೇಕೆಂಬ ಇಚ್ಛೆಯಿದೆ. ನನ್ನನ್ನೂ ನಿಮ್ಮ ಸಂಗಡ ಕರೆದೊಯ್ಯುವಿರಾ?''

ಈ ಮೇರೆಗೆ ಒಬ್ಬ ಪಾಟೀಲನು ಮಾತನಾಡಲು, ಅವನ ಅಣ್ಣ ನಾದ ಭಾನು ಎಂಬವನು:—''ನಾಸಾ, ನೀನು ಇನ್ನೂ ಚಿಕ್ಕವನು; ನಿನ್ನ ಸಂಸಾರವಾಗತಕ್ಕದ್ದಿದೆ. ನೀನು ಮನೆಯಲ್ಲಿರು. ನಾನು ಶಿವಾಜಿ ಮಹಾರಾಜರ ಬಳಿಗೆ ಹೋಗುತ್ತೇನೆ'' ಎಂದನು.

ಹೀಗೆ ಅವರಲ್ಲಿ ಸಂಭಾಷಣೆಗಳು ನಡೆಯುತ್ತಿರಲು, ದೂರದಲ್ಲಿರುವ ಒಂದು ಮರಡಿಯ ಮೇಲಿಂದ ಹತ್ತಿಪ್ಪತ್ತು ಜನ ಮುಸಲ್ಮಾನ ಸ್ವಾರರು ಬರುತ್ತಿರುವದು ಕಂಡಿತು. ಆಗ ನೇತಾಜಿಯು:—ಭಾನು ಪಾಟೀಲ, ನೀನು ಹಿರಿಯನಾದ್ದರಿಂದ ನೀನೇ ಮನೆಯಲ್ಲಿರು; ನಾನಾ, ನೀನು ನನ್ನ ಸಂಗಡ ಬಾ. ಇನ್ನು ಮುಂದೆ ನಾವು ಇಲ್ಲಿ ನಿಂತು ಪ್ರಯೋಜನವಿಲ್ಲ; ಆ ಮುಸಲ್ಮಾನ ಸ್ವಾರರು ಇತ್ತ ಕಡೆಗೇ ಬರುವಂತೆ ತೋರುತ್ತಿದೆ. ಬೇಗನೆ ಮನೆಗೆ ಹೋಗು, ಎಂದು ನುಡಿದನು. ಆಗ ಭಾನುಪಾಟೀಲನು: ಹಾಗೆಯೇ ಆಗಲಿ; ನಾನು ಮನೆಗೆ ಹೋಗುತ್ತೇನೆ. ನನಗೆ ಸ್ವಾರರ ಅಂಜಿಕೆಯಿಲ್ಲ. ಮುಂದೆ ಕಾಣುವ ಗಿಡಗಳಲ್ಲಿ ಸೇರಿಕೊಂಡೆನೆಂದರೆ, ತೀರಿತು; ನಾನು ಪಾರಾಗುವೆನು. ನೀವು ಮಾತ್ರ ಬೇಗ ಹೊರಡಿರಿ, ಎಂದನು.

ನೇತಾಜಿಯೂ, ನಾನಾ ಪಾಟೀಲನೂ ಒಂದೊಂದು ಕುದುರೆಯನ್ನೇರಿ ಆ ಸ್ಥಳವನ್ನು ಬಿಟ್ಟರು. ಭಾನು ಪಾಟೀಲನು ಗಿಡಗಳಲ್ಲಿ ಸೇರಿ ಕಾಣದಂತಾದನು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಅಲ್ಲಿಗೆ ಆ ಮುಸಲ್ಮಾನ ಸ್ವಾರರು ಬಂದರು. ಆಗ ಅವರು ಅಲ್ಲಿ ನಡೆದ ಪ್ರಕಾರವನ್ನು ಕಂಡು ಅತ್ಯಂತ ಸಂತಾಪಗೊಂಡರು. ಮರಾಟರು ಕಟ್ಟಿ ಹಾಕಿದ್ದ ಮುಸಲ್ಮಾನ ಸ್ವಾರರಿಗೆ ಮಹಾರಾಷ್ಟ್ರಭಾಷೆಯು ತಿಳಿಯುತ್ತಿದ್ದಿಲ್ಲವಾದ್ದರಿಂದ ನೇತಾಜಿ, ನಾನಾಪಾಟೀಲ, ಭಾನು ಪಾಟೀಲರು ಏನೇನು ಮಾತಾಡಿದರೆಂಬದು ಅವನಿಗೆ ಗೊತ್ತಾಗಲಿಲ್ಲ. ಅದರಿಂದ ಅವನು ಒಬ್ಬ ಮರಾಟನು ಬಂದು ಈ ರೀತಿ ನಮ್ಮ ದುರ್ದೆಸೆಮಾಡಿದನೆಂಬದನ್ನು ಹೇಳಿ, ಅವರು ಹೋದ ದಿಕ್ಕನ್ನು ಮಾತ್ರ ಅವರಿಗೆ ತೋರಿಸಿದನು. ಅವರ ಬೆನ್ನ ಹತ್ತಿ ಅವರನ್ನು ಹಿಡಿಯಬೇಕೆಂದು ಕೆಲವು ಜನ ಸ್ವಾರರು ತ್ವೇಷದಿಂದ ನುಡಿದರು. ಕೆಲವರು ಅವರನ್ನು ಎಲ್ಲಿ ಹುಡುಕುತ್ತ ತಿರುಗಬೇಕು? ಸತ್ತವನಿಗೆ ಮಣ್ಣು ಕೊಟ್ಟು, ಈತನನ್ನು ಛಾವಣಿಗೆ ಒಯ್ದು ಬಿಡೋಣ ಎಂದೆಂದರು; ಆದರೆ ಹೊಸ ಹುರುಪಿನ ಕೆಲ ಜನ ಸ್ವಾರರು ಮಾತ್ರ ಆ ಮರಾಟರನ್ನು ಹುಡುಕಿಯೇ ತೀರುವೆವೆಂದು ಹಟ

ಹಿಡಿದರು. ಕೆಲವರು ಅಲ್ಲಿ ಉಳಿದರು ೮-೧೦ ಜನ ಸ್ವಾರರು ನೇತಾಜಿ ಹಾಗು ನಾನಾ ಪಾಟೀಲ ಇವರ ಕುದುರೆಗಳ ಖುರಪುಟಗಳ ಸುಳುವಿನಿಂದ ಅವರನ್ನು ಬೆನ್ನಟ್ಟಿ ನಡೆದರು.

ಇತ್ತ ನೇತಾಜಿ-ನಾನಾಪಾಟೀಲ ಇವರು ಕುದುರೆಗಳನ್ನು ಓಡಿಸುತ್ತ ನಡೆದಿದ್ದರು; ನೇತಾಜಿಯೊಬ್ಬನೇ ಆಗಿದ್ದರೆ, ಮುಸಲ್ಮಾನರಿಂದ ಬಹು ದೂರ ಹೋಗುತ್ತಿದ್ದನು; ಆದರೆ ನಾನಾನಿಗೆ ಕುದುರೆಯ ಮೇಲೆ ಕೂಡ್ರುವ ಅಭ್ಯಾಸವು ಕಡಿಮೆಯಿದ್ದದರಿಂದ, ನೇತಾಜಿಯಂತೆ ಕುದುರೆಯನ್ನು ಓಡಿಸಲಿಕ್ಕೆ ಅವನಿಂದಾಗಲಿಲ್ಲ. ಆದ್ದರಿಂದ ನೇತಾಜಿಯು ಅವನನ್ನು ಸಂಭಾಳಿಸಿ ಕರೆದುಕೊಂಡು ಹೋಗಬೇಕಾಯಿತು. ಹೀಗೆ ಇವರ ವೇಗವು ಕಡಿಮೆಯಾಗಲು, ಮುಸಲ್ಮಾನ ಸ್ವಾರರಿಗೂ ಇವರಿಗೂ ಇರುವ ಅಂತರವು ಕಡಿಮೆಯಾಯಿತು. ಸ್ವಲ್ಪ ದೂರದಲ್ಲಿ ಒಂದು ಮರಡಿಯ ಮೇಲೆ ಮುಸಲ್ಮಾನ ಸ್ವಾರರು ಬರುತ್ತಿರುವದು ಇವರಿಗೆ ಗೊತ್ತಾಯಿತು. ಕೂಡಲೆ ನೇತಾಜಿಯು ನಾನಾನನ್ನು ಕುರಿತು:—ನಾನಾ, ಪ್ರಸಂಗವು ಕಠಿಣವಿರುವದು. ನಿನ್ನಿಂದ ಕುದುರೆಯನ್ನು ವೇಗದಿಂದ ನಡೆಸಲಿಕ್ಕೆ ಆಗುವದಿಲ್ಲಾದ್ದರಿಂದ ನಾವು ನಿಶ್ಚಯವಾಗಿಯೂ ಆ ಮುಸಲ್ಮಾನರ ಕೈಗೆ ಸಿಗುವೆವು. ಅವರು ನಮ್ಮನ್ನು ನೋಡಿಯೇ ಇಷ್ಟು ಧಾವಿಸಿ ಬರುತ್ತಿರುವರು. ಮುಂದೆ ಏನು ಮಾಡಬೇಕು? ಎಂದನು. ಅದಕ್ಕೆ ನಾನಾನು:—ನೇತಾಜಿ, ನಾವು ಇನ್ನು ಅಂಜುವ ಕಾರಣವಿಲ್ಲ. ಕುದುರೆಯನ್ನು ಹತ್ತುವ ಅಭ್ಯಾಸವು ನನಗಿಲ್ಲದ್ದರಿಂದ ಇದಕ್ಕೂ ಹೆಚ್ಚಿಗೆ ವೇಗದಿಂದ ಹೋಗಲಿಕ್ಕೆ ನನಗೆ ಬರುವದಿಲ್ಲ ಮೇಲಾಗಿ ನನಗೆ ಈಗ ದಣವೂ ಆಗಿದೆ. ಇಲ್ಲಿಗೆ ಸಮೀಪದಲ್ಲಿರುವ ಒಂದು ಹಳ್ಳಿಯಲ್ಲಿ ನಮ್ಮ ಅಜ್ಜನ ಮನೆಯಿದೆ; ಆದ್ದರಿಂದ ನನ್ನ ಬಾಲ್ಯವೆಲ್ಲ ಈ ಪ್ರಾಂತದಲ್ಲಿಯೇ ಕಳೆದಿದೆ. ಈ ಗುಡ್ಡವನ್ನು ನಾನು ಹಲವು ಸಾರೆ ಅಡ್ಡಾಡಿ ನೋಡಿರುವೆನು. ಇತ್ತ ಬಲಕ್ಕೆ ಕಾಣುವ ಗಿಡಗಳ ಗುಂಪಿನಲ್ಲಿ ಒಂದು ದೊಡ್ಡ ಗವಿಯಿರುತ್ತದೆ; ಅದರೊಳಗೆ ಕುದುರೆ ಸಹಿತವಾಗಿ ನಾವು ಹೋಗಬಹುದು. ಕೆಲಹೊತ್ತು ನಾವು ಅಲ್ಲಿ ಕುಳಿತುಕೊಂಡರೆ, ಮುಸ

ಲ್ಮಾನರಿಗೆ ನಮ್ಮ ಸುಳುವು ಹತ್ತದೆ ಹೋಗುವದು, ಎಂದನು.

ನಾನಾನ ಈ ಹಂಚಿಕೆಯು ನೇತಾಜಿಗೂ ಸಮರ್ಪಕವಾಗಿ ತೋರಿತು. ಅವರಿಬ್ಬರೂ ತಮ್ಮ ಕುದುರೆಗಳ ಖುರಪುಟಗಳಿಗೆ ಗಿಡದ ಸೊಪ್ಪನ್ನು ಕಟ್ಟಿ ಬಹು ಜಾಗ್ರತೆಯಾಗಿ ಆ ಗುಹೆಗೆ ಬಂದರು. ನಾನಾನ ಹೇಳಿಕೆಯಂತೆ ಗುಹೆಯು ಬಹು ದೊಡ್ಡದಾಗಿತ್ತು. ಒಳಗೆ ಕಗ್ಗತ್ತಲು ಕವಿದಿತ್ತು. ಒಳಗೆ ಹಿಂಸ್ರ ಪಶುಗಳಿರಬಹುದೆಂದು ನೇತಾಜಿಯು ಒದರಿ ಒದರಿ ಗದ್ದಲ ಮಾಡಿ ನೋಡಿದನು. ಅಲ್ಲಿ ಹಿಂಸ್ರಪಶುಗಳಿಲ್ಲೆಂಬದು ನಂಬಿಕೆಯಾಗಲು, ಅವರು ಆ ಕಗ್ಗತ್ತಲೆಯ ಗುಹೆಯಲ್ಲಿ ಕುದುರೆಗಳನ್ನು ಕಟ್ಟಿದರು. ಆಗ ಅವರಿಗೆ ಬಹಳ ಹಸಿವೆಯಾಗಿತ್ತು; ಆದರೆ ಹತ್ತರ ಆಹಾರ ಸಾಮುಗ್ರಿಯೇನೂ ಇರದ್ದರಿಂದ, ಹಾಗೆಯೇ ಮಲಗಿಕೊಂಡರು. ದಣಿವು ಆದ್ದರಿಂದ, ಅವರಿಗೆ ಗಕ್ಕನೆ ನಿದ್ದೆ ಹತ್ತಿತು

ನೇತಾಜಿ ಹಾಗು ನಾನಾಜಿ ಇವರಿಬ್ಬರು ನಿದ್ದೆಯಿಂದೆಚ್ಚತ್ತು ನೋಡುವಷ್ಟರಲ್ಲಿ, ಹೊರಗೆ ಒಂದೇ ತಾಸು ಹೊತ್ತು ಉಳಿದಿತ್ತು. ನೇತಾಜಿಯು ಹೊರಗೆ ಬಂದು, ಒಂದು ಎತ್ತರವಾದ ಗಿಡವನ್ನೇರಿ ಮುಸಲ್ಮಾನರ ಸುಳುವನ್ನು ನೋಡಿದನು. ಆಗ ಅವನಿಗೆ ಮುಸಲ್ಮಾನರ ಸುಳುವು ಎಲ್ಲಿಯೂ ಇದ್ದಂತೆ ಕಂಡುಬರಲಿಲ್ಲ. ಹೊಟ್ಟೆಯು ಬಹಳವಾಗಿ ಹಸಿದದ್ದರಿಂದ ನಾನಾಜಿಯು ನೇತಾಜಿಯನ್ನು ತನ್ನ ಅಜ್ಜನ ಊರಿಗೆ ಕರೆದೊಯ್ದನು. ಆಗ ಮನೆಯಲ್ಲಿ ನಾನಾಜಿಯ ಮಾವನಿದ್ದನು. ಅವನು ಬಹಳ ಪುಕ್ಕನಿದ್ದದರಿಂದ, ನೇತಾಜಿ ಹಾಗು ನಾನಾಜಿ ಇವರನ್ನು ಮನೆಯಲ್ಲಿಟ್ಟುಕೊಳ್ಳದೆ, ಅವರಿಗೆ ಸಿಂತ ಕಾಲಲ್ಲಿಯೇ ರೊಟ್ಟೀ-ಬುತ್ತಿಯನ್ನು ಕೊಟ್ಟು ಕಳುಹಿಬಿಟ್ಟನು. ನೇತಾಜಿಗಾದರೂ ಇಷ್ಟೇ ಬೇಕಾದ್ದರಿಂದ, ಅವರು ಪುನಃ ಆ ಗುಹೆಗೆ ಬಂದರು; ಮತ್ತು ಸಮೀಪದಲ್ಲಿರುವ ಝರಿಯಲ್ಲಿ ಕೈಕಾಲು ತೊಳೆದು, ಹೊಟ್ಟೆ ತುಂಬ ರೊಟ್ಟೀ ತಿಂದು ನೀರು ಕುಡಿದರು. ಬಳಿಕ ಅವರು ಕುದುರೆಗಳಿಗೆ ನೀರು ಕುಡಿಸಿ, ಅವುಗಳಿಗೆ ಹುಲ್ಲು ಕಿತ್ತಿ ಹಾಕಿ, ಪುನಃ ಮಲಗಿಕೊಂಡರು. ಬೆಳ್ಳಗೆ ಬೆಳಗಾದ ಮೇಲೆ ಅವರಿಗೆ ಎಚ್ಚರವಾಯಿತು.

ಬಳಿಕ ಅವರಿಬ್ಬರೂ ರಾತ್ರಿಯಲ್ಲಿ ಉಳಿದ ರೊಟ್ಟಿಗಳನ್ನು ತಿಂದು ರಾಮಜಿಯ ಗುಡಿಸಿಲಿನ ಮಾರ್ಗವನ್ನು ಹಿಡಿದರು. ಮುಸಲ್ಮಾನ ಸ್ವಾರರನ್ನು ತಪ್ಪಿಸಿ ಬರುವ ಸಂದರ್ಭದಲ್ಲಿ ಅವರು ಖಂಡಾಳೆ ಘಟ್ಟವನ್ನು ಬಿಟ್ಟು ಬಹು ದೂರ ಬಂದಿದ್ದರು; ಆದರೂ ನಾನಾಜಿಯು ಆ ಪ್ರಾಂತವನ್ನು ಬಲ್ಲವನಾದ್ದರಿಂದ, ಸಮೀಪದ ಒಳದಾರಿಯನ್ನು ಹುಡುಕಿ ಖಂಡಾಳೆ ಘಟ್ಟವನ್ನಿಳಿದು, ರಾಮಜಿಯ ಗುಡಿಸಿಲಿಗೆ ಹೋದನು. ಆಗ ರಾಮಜಿಯ ಗುಡಿಸಿಲದಲ್ಲಿ ಬಹು ಜನರ ಜಾತ್ರೆ ನೆರೆದಂತಾಗಿತ್ತು. ಇದೇನು ಚಮತ್ಕಾರವೆಂಬದು ನೇತಾಜಿಗೂ ನಾನಾಜಿಗೂ ತಿಳಿಯದಂತಾಯಿತು. ರಾಮಜಿಯ ಗುಡಿಸಿಲದ ಮೇಲೆ ಯಾರಾದರೂ ದಾಳಿ ಮಾಡಬಂದಿರುವರೋ ಏನೋ ಎಂಬ ಕಲ್ಪನೆಯು ಅವರಲ್ಲಿ ತಲೆದೋರಿತು. ಏನೇ ಇರಲಿ, ಮುಂದಕ್ಕೆ ಹೋಗೋಣವೆಂದು ಧೈರ್ಯದಿಂದ ಅವರು ತಮ್ಮ ಕುದುರೆಗಳನ್ನು ಮುಂದಕ್ಕೆ ನೂಕಿದರು. ರಾಮಜಿಯ ಗುಡಿಸಿಲವು ತೀರ ಹತ್ತಿರಕ್ಕೆ ಬಂದಿತು. ಅಷ್ಟರಲ್ಲಿ ಗುಡಿಸಿಲದಲ್ಲಿದ್ದ ರಾಮಜಿಯು ನೇತಾಜಿಯ ಬರುವಿಕೆಯನ್ನು ನೋಡಿ, ಅವನನ್ನು ಎದುರ್ಗೊಂಡನು. ನೇತಾಜಿಯು ಕುದುರೆಯಿಂದಿಳಿದನು. ರಾಮಜಿಯು ಅವನನ್ನೂ ನಾನಾಜಿಯನ್ನೂ ಒಳಗೆ ಕರೆದುಕೊಂಡು ಹೋಗಿ ಕುಳ್ಳಿರಿಸಿದನು.

ರಾಜಮಾಚಿಯ ಕಿಲ್ಲೆಯಿಂದ ದತ್ತಾಜಿಯು ತನ್ನ ಪರಿವಾರದೊಡನೆ ಲೋಹಗಡಕ್ಕೆ ಹೊರಟದ್ದು ನಮ್ಮ ವಾಚಕರ ಲಕ್ಷ್ಯದಲ್ಲಿರಬಹುದು. ಆತನು ಅಡ್ಡದಾರಿಯಿಂದ ಖಂಡಾಳೆ ಘಟ್ಟವನ್ನಿಳಿದು ನೇತಾಜಿಯು ಹೇಳಿದ ಮೇರೆಗೆ ರಾಮಜಿಯ ಗುಡಿಸಿಲಿಗೆ ಹೋದನು. ನೇತಾಜಿಯ ಆಪ್ತರೆಂದು ತಿಳಿದು, ರಾಮಜಿಯು ಅವರ ಉಪಚಾರವನ್ನು ಚನ್ನಾಗಿ ಮಾಡಿದನು; ಮತ್ತು ಅವರನ್ನು ಒತ್ತಾಯದಿಂದ ಆ ದಿವಸ ತನ್ನಲ್ಲಿಯೇ ಇಟ್ಟುಕೊಂಡನು. ನೇತಾಜಿಗೂ ತನಗೂ ಹೇಗೆ ಸ್ನೇಹ ಕೂಡಿತೆಂಬದನ್ನು ರಾಮಜಿಯು ಒಳ್ಳೇ ರಸಿಕತೆಯಿಂದ ಅವರಿಗೆ ತಿಳಿಸಿ, ನೇತಾಜಿಯ ಶ್ರೇಷ್ಠ ಗುಣಗಳನ್ನು ವರ್ಣಿಸಿದನು. ಅದನ್ನು

ಕೇಳಿ ದತ್ತಾಜಿಗೂ ಕಾಶಿಗೂ ಹಿಡಿಸಲಾರದಷ್ಟು ಆನಂದವಾಯಿತು.

ಮರುದಿನ ರಾಮಜಿಯು ದತ್ತಾಜಿ ಮೊದಲಾದವರೊಡನೆ ಸ್ವಾರಿಯನ್ನು ತೀರಿಸಿ, ಅವರನ್ನು ಲೋಹಗಡಕ್ಕೆ ಮುಟ್ಟಿಸಿ ಬರುವದಕ್ಕೆಂದು ಹೊರಟನು. ಆಗ ದೇಶದಲ್ಲಿ ಅನಾಯಕತ್ವವಿದ್ದುದರಿಂದ ಪುಂಡರ ಹಾಗು ದರವಡೆಗಾರರ ಚೆಲ್ಲಾಟವು ಹೆಚ್ಚಾಗಿತ್ತು. ಒಂದು ಊರಿಂದ ಹೊರಟವರು, ಮತ್ತೊಂದು ಊರಿಗೆ ಸುರಕ್ಷಿತವಾಗಿ ಮುಟ್ಟಿಯೇ ಮುಟ್ಟುವರೆಂಬ ನಿಯಮವಿದ್ದಿಲ್ಲ. ಇಂಥ ಪುಂಡರಲ್ಲಿ 'ವೆಂಕಾಜಿ ವಾಘ' ಎಂಬವನೊಬ್ಬನು ಹೆಚ್ಚಿನವನಾಗಿದ್ದನು. ಇವನ ಕೈಯಲ್ಲಿ ಇನ್ನೂರು-ಮುನ್ನೂರು ಜನ ಭಿಲ್ಲ, ಲಮಾಣಿ, ಮರಾಟ ಮೊದಲಾದ ಜಾತಿಯ ಜನರಿದ್ದರು. ಅವರ ಸಹಾಯದಿಂದ ವೆಂಕಾಜಿಯು ದಾರೀಬಡಿಯುವ ಹಾಗು ದರವಡೆ-ಕೊಲೆ ಮಾಡುವ ದುಷ್ಕೃತ್ಯಗಳನ್ನು ನಡಿಸಿ, ಅಗಣಿತ ದ್ರವ್ಯ ಸಂಪಾದನ ಮಾಡಿದ್ದನು. ಖಂಡಾಳೆ ಘಟ್ಟದಿಂದ ಕೆಲವು ಮೈಲು ಅಂತರದಲ್ಲಿ ವೆಂಕಾಜಿಯು ವಾಸಮಾಡತಕ್ಕ ಒಂದು ಗುಹೆಯಿತ್ತು. ಆ ಗುಹೆಯು ಬುದ್ಧರ ಕಾಲದಲ್ಲಿ ಭಿಕ್ಷುಕ-ಭಿಕ್ಷುಕಿಯರ ವಾಸಕ್ಕೋಸ್ಕರ ಆ ಕಾಲದ ರಾಜರಿಂದ ಕಟ್ಟಿಸಲ್ಪಟ್ಟದ್ದಾಗಿತ್ತು. ಅದು ಬಹು ವಿಶಾಲವಾಗಿದ್ದು, ಅದರಲ್ಲಿ ಹಲವು ಕೊಠಡಿಗಳಿದ್ದವು. ಈಗ ಅದು ಸ್ವಲ್ಪ ಮುರಕಳಿಗೆ ಬಂದಿತ್ತು; ಆದರೂ ವೆಂಕಾಜಿಯು ಅದು ತನಗೆ ಸುರಕ್ಷಿತ ಸ್ಥಳವೆಂದೆಣಿಸಿ, ಅಲ್ಲಿಯೇ ತನ್ನ ವಸತಿಯನ್ನಿಟ್ಟಿದ್ದನು. ಅವನ ಅಂಜಿಕೆಯು ಆ ಪ್ರಾಂತದಲ್ಲಿ ವಿಶೇಷವಾಗಿತ್ತು. ದತ್ತಾಜಿಯಾದರೂ ವೆಂಕಾಜಿಯ ಕೈಗೆ ಸಿಗಬಾರದೆಂದು ಆದಷ್ಟು ಜಪ್ಪಿಸಿಕೊಂಡು ಮಾರ್ಗಕ್ರಮಣ ಮಾಡುತ್ತಿದ್ದನು. ಅವರು ತಾಸೆರಡು ತಾಸಿನ ದಾರಿಯನ್ನು ಕ್ರಮಿಸುವಷ್ಟರಲ್ಲಿ, ವೆಂಕಾಜಿಯ ಜನರು ಇವರನ್ನು ನೋಡಿದರು. ಕೂಡಲೆ ಅವರು ತಮ್ಮ ಒಡೆಯನಿಗೆ ವರದಿಯನ್ನು ಮುಟ್ಟಿಸಿದರು. ಪ್ರಯಾಣಿಕರ ಸಂಗಡ ಒಬ್ಬ ಸುಂದರ ಸ್ತ್ರೀಯೂ ಇರುವಳೆಂಬದನ್ನು ಕೇಳಿ, ವೆಂಕಾಜಿಗೆ ಹಿಡಿಸಲಾರದಷ್ಟು ಆನಂದವಾಯಿತು. ಕೂಡಲೆ ಅವನು ಐವತ್ತು ಜನರದೊಂದು ತುಕ್ಕಡಿಯನ್ನು

ತಕ್ಕೊಂಡು, ದತ್ತಾಜಿಯನ್ನು ಮುತ್ತಿದನು. ಇಷ್ಟೊತ್ತಿನ ವರೆಗೆ ಯಾವ ಗಂಡಾಂತರಕ್ಕೆ ಅಂಜುತ್ತ ದತ್ತಾಜಿಯು ನಡೆಯುತ್ತಿದ್ದನೋ, ಆ ಗಂಡಾಂತರವೇ ಮೂರ್ತಿಮತ್ತಾಗಿ ಆತನ ಎದುರಿಗೆ ಬಂದು ನಿಂತಿತು! ಆಗ ಆತನು ಹೌಹಾರಿ ನಿಂತುಕೊಳ್ಳಲು, ರಾಮಜಿಯು ದತ್ತಾಜಿಯ ಕಿವಿಯಲ್ಲಿ:—"ನಾನು ಈ ಜನರಿಂದ ತಪ್ಪಿಸಿಕೊಂಡು ಹೋಗಿ, ನೂರಿನ್ನೂರು ಜನ ಮರಾಟರನ್ನು ಕೂಡ ಹಾಕಿ ವೆಂಕಾಜಿಯ ಪಾರುಪತ್ಯ ಮಾಡುವೆನು. ಅವನಿರುವ ಸ್ಥಳವು ನನಗೆ ಗೊತ್ತಿರುತ್ತದೆ." ಎಂದು ಹೇಳಿ, ಎಲ್ಲರೊಡನೆ ಓಡಿಹೋಗುವಂತೆ ನಟಿಸಿ, ಆ ಜನರಿಂದ ತಪ್ಪಿಸಿಕೊಂಡು ಓಡಿಹೋದನು ರಾಮಜಿಯು ನುಡಿದಂತೆ ನಡೆಯತಕ್ಕ ಮನುಷ್ಯನೆಂಬದು ದತ್ತಾಜಿಗೆ ಗೊತ್ತಿದ್ದದರಿಂದ, ಆವನು ರಾಮಜಿಯು ಪಾರಾದದ್ದಕ್ಕೆ ಸಮಾಧಾನಪಟ್ಟನು. ರಾಮಜಿಯು ಯಾಕೆ ಓಡಿಹೋದನೆಂಬಬರ ಕಾರಣವು ವೆಂಕಾಜಿ ವಾಘನಿಗೆ ಹೊಳೆಯಲಿಲ್ಲ. ತನ್ನ ಬಲವಾದ ಮುತ್ತಿಗೆಯ ಮೂಲಕ ಎಲ್ಲರಿಗೂ ತಪ್ಪಿಸಿಕೊಳ್ಳಲಿಕ್ಕೆ ಸಾಧ್ಯವಾಗದಿರಲು, ರಾಮಜಿಯೊಬ್ಬನೇ ತಪ್ಪಿಸಿಕೊಂಡನೆಂದು ಆತನು ತಿಳಿದನು. ಬಳಿಕ ಅವನು ದತ್ತಾಜಿಗೆ:—ಎಲೋ ಪಾಟೀಲ, ನಿನ್ನಲ್ಲಿ ಏನೇನು ಪದಾರ್ಥಗಳಿರುವವೋ ಅವನ್ನೆಲ್ಲ ಹೊರಗೆ ತೆಗೆದಿಡು, ಎಂದು ಗದ್ದರಿಸಿದನು; ಆದರೆ ದತ್ತಾಜಿಯು ಅವನ ಗದ್ದರಿಕೆಗೆ ಸಂತಾಪಗೊಂಡು:—"ಮೂರ್ಖಾ. ಸ್ವಜನರನ್ನು ಹಿಂಸಿಸುವ ಈ ನೀಚ ಉದ್ಯೋಗವನ್ನೇನು ಕೈಕೊಂಡೆ! ನಿನ್ನಲ್ಲಿ ಪೌರುಷವೇ ಇದ್ದರೆ, ಮುಸಲ್ಮಾನ ದಂಡಾಳುಗಳ ಮೇಲೆ ಏರಿ ಹೋಗು; ಅವರಿಂದ ನಮ್ಮ ಮಾತೃಭೂಮಿಗೆ ಆಗುವ ಕಷ್ಟ-ನಷ್ಟಗಳನ್ನು ತಪ್ಪಿಸು; ಇಲ್ಲದಿದ್ದರೆ ಶಿವಾಜಿ ಮಹಾರಾಜರನ್ನಾದರೂ ಕೂಡಿಕೋ; ಅಂದರೆ ಗೋ-ಬ್ರಾಹ್ಮಣರನ್ನು ಸಂರಕ್ಷಿಸುವ ಪುಣ್ಯ ಕೆಲಸವಾದರೂ ನಿನ್ನಿಂದ ಸಂಭವಿಸೀತು; ಈ ಹಾದೀ ಬಡಿಯುವ, ಅದರಲ್ಲೂ ಸ್ವಬಾಂಧವರನ್ನೇ ಹಿಂಸಿಸುವ ಈ ಕೆಟ್ಟ ಕೆಲಸದಿಂದ ನಿನಗೆ ಏನೂ ಪ್ರಯೋಜನವಾಗಲಿಕ್ಕಿಲ್ಲ" ಎಂದು ನುಡಿದನು.

ದತ್ತಾಜಿಯ ಈ ಮಾತುಗಳನ್ನು ಕೇಳಿ ವೆಂಕಾಜಿಯು ಗಹ ಗಹಿಸಿ ನಕ್ಕು:-ದತ್ತಾಜೀ, ಇನ್ನು ನಿನ್ನೀ ಬ್ರಹ್ಮಜ್ಞಾನವನ್ನು ಕಟ್ಟಿಡು. ಇಲ್ಲಿ ಇಂಥ ಪಂಟು ಬಡಿಯಬೇಡ. 'ನೀನು ಆ ಸೊಟ್ಟ ಶಿವಾಜಿಯನ್ನು ನನ್ನ ಮುಂದೆ ಇನ್ನೊಮ್ಮೆ ಹೊಗಳಿದೆಯೆಂದರೆ, ನಿನ್ನ ರುಂಡವನ್ನು ಧರೆಗಿಳಿಸಿ ಬಿಡುವೆನು, ಎಚ್ಚರಿಕೆ!' ನೀನು ಜೀವದಿಂದ ಹೋಗಬೇಕಾ ಗಿದ್ದರೆ, ಈ ತರುಣ ಸ್ತ್ರೀಯನ್ನು ನನಗೆ ಒಪ್ಪಿಸಿ, ಹೊರಟು ಹೋಗು. ನಿನ್ನ ಕೂದಲಿಗೆ ಸಹ ಧಕ್ಕೆ ಹತ್ತದಂತೆ ನಿನ್ನನ್ನು ಸುರಕ್ಷಿತವಾದ ಸ್ಥಳಕ್ಕೆ ಮುಟ್ಟಿಸುವೆನು. ಈ ಸ್ತ್ರೀಯು ನನ್ನ ಹೆಂಡತಿಯಾಗಲಿಕ್ಕೆ ಯೋಗ್ಯಳಿರುವಳು! ಆ ಏನಂದಿ? ಬೇಗನೆ ಹೇಳು, ಎಂದನು.

---

## ಮೋರಯಾ ಗೋಸಾವಿ

ವೆಂಕಾಜಿಯಂಥ ನೀಚ ದರವಡೆಗಾರನು ಕಾಶಿಯನ್ನು ಕೇಳುವ ನೆಂದು ತಿಳಿದು ದತ್ತಾಜಿಯು ಮತ್ತಿಷ್ಟು ಸಂತಪ್ತನಾದನು. ಅವನು ಒಳ್ಳೇ ಆವೇಶದಿಂದ ನುಡಿದನೇನಂದರೆ:—"ಮೂರ್ಖಾ, ನಿನ್ನಂಥ ಕಳ್ಳನಿಗೆ ನನ್ನ ಕಾಶಿಯನ್ನು ಕೊಡುವೆನೇ? ಕಾಶಿಯನ್ನು ಲಗ್ನವಾಗ ಲಿಕ್ಕೆ ನೇತಾಜಿಯಂಥ ಮಹಾ ಬಲಿಷ್ಠ ಕುಲಶೀಲನೇ ಯೋಗ್ಯನು. ಅವನಿಗೆ ನಾನು ಆಕೆಯನ್ನು ಕೊಟ್ಟು ಬಿಟ್ಟಿರುವೆನು. ನಿನ್ನಂಥ ಮಂಗ ನು ಈ ವಿಷಯದಲ್ಲಿ ಬಾಯಿ ಹಾಕುವದೇ ಮಹದಪರಾಧವಿರುತ್ತದೆ!"

ದತ್ತಾಜಿಯ ಈ ತಿರಸ್ಕಾರ ವಾಣಿಯಿಂದ ವೆಂಕಾಜಿಯು ಹುಚ್ಚೆದ್ದು ಹರಿಯಹತ್ತಿದನು. ಅವನು ತನ್ನ ಸೇವಕರಿಗೆ ದತ್ತಾಜಿಯನ್ನೂ, ಕಾಶಿಯನ್ನೂ ಸೆರೆಹಿಡಿಯಲಿಕ್ಕೆ ಅಪ್ಪಣೆ ಮಾಡಿದನು. ಆಗ ದತ್ತಾ ಜಿಯು:—ನಾವು ನಿನ್ನ ಸೆರೆಯಲ್ಲಿಯೇ ಇದ್ದು, ಕರೆದಲ್ಲಿಗೆ ಬರುತ್ತೇವೆ; ಆದರೆ ನಮ್ಮ ಮೈ-ಕೈ ಮುಟ್ಟಿದರೆ ಮಾತ್ರ ನಿನ್ನ ಗತಿ ನೆಟ್ಟಗಾಗಲಿ ಕ್ಕಿಲ್ಲ, ಎಂದು ಸಂತಾಪದಿಂದ ನುಡಿದನು. ಅಂದು ವೆಂಕಾಜಿಗೆ ಏನು ತಿಳಿಯಿತೋ-ಏನೋ? ಅವನು ಕಾಶಿಯನ್ನೂ, ದತ್ತಾಜಿಯನ್ನೂ ಹಗ್ಗ

ಗಳಿಂದ ಪ್ರತಿಬಂಧಿಸದೆ, ಹಾಗೆಯೇ ತನ್ನ ಗುಹೆಗೆ ಕರೆದುಕೊಂಡು ನಡೆದನು.

ಗುಹೆಗೆ ಕರೆದುಕೊಂಡು ಹೋದ ಬಳಿಕ ವೆಂಕಾಜಿಯು ದತ್ತಾಜಿ ಹಾಗು ಕಾಶಿಯ ವ್ಯವಸ್ಥೆಯನ್ನು ಚನ್ನಾಗಿರಿಸಿದನು; ಯಾಕಂದರೆ ತಾನು ಇವನೊಡನೆ ಸೌಮ್ಯರೀತಿಯಿಂದ ನಡೆದುಕೊಂಡರೆ, ಕಾಶಿಯು ತನ್ನನ್ನು ಲಗ್ನವಾಗಲಿಕ್ಕೆ ಒಪ್ಪಬಹುದೆಂದು ಆ ಕಾಮಾಂಧನು ತಿಳಿದನು. ಇಂದಿನವರೆಗೆ ಅವನು ಸುಲಿಗೆಯ ಕಾರ್ಯವನ್ನು ನಡೆಸಿದ್ದರೂ, ಇಂಥ ಸುಂದರ ಸ್ತ್ರೀಯ ಲಾಭವು ಎಂದೂ ಆಗಿದ್ದಿಲ್ಲ; ಆದ್ದರಿಂದ ಆತನಿಗೆ ಇಂದಿನ ಈ ಸುಲಿಗೆಯಿಂದ ಸ್ವರ್ಗವು ಮೂರೇ ಗೇಣು ಉಳಿದಂತಾಯಿತು. ಕಾಶಿಯನ್ನು ಲಗ್ನ ಮಾಡಿಕೊಂಡು ಆಕೆಯೊಡನೆ ಹೇಗೆ ಹೇಗೆ ವಿಲಾಸ ಭೋಗಿಸಬೇಕೆಂಬ ಮಂಡಿಗೆಗಳನ್ನು ಅವನು ತನ್ನ ಮನಸ್ಸಿನಲ್ಲಿಯೇ ತಿನ್ನಹತ್ತಿದ್ದನು. ಮರುದಿನ ಅವನು ದತ್ತಾಜಿಯನ್ನೂ-ಕಾಶಿಯನ್ನೂ ತನ್ನ ಬಳಿಗೆ ಕರೆತರಿಸಿ, ಅವರಿಗೆ ತನ್ನ ಎಲ್ಲ ವೈಭವವನ್ನೂ ತೋರಿಸಿದನು. ಆತನ ಬಳಿಯ ಬೆಳ್ಳಿ ಬಂಗಾರದ ಆಭರಣಗಳ ಹಾಗು ದ್ರವ್ಯದ ರಾಶಿಯನ್ನು ನೋಡಿ ದತ್ತಾಜಿಗೆ ಆನಂದವಾಗುವದರ ಬದಲು, ಆ ನೀಚನ ವಿಷಯವಾಗಿ ಮತ್ತಿಷ್ಟು ತಿರಸ್ಕಾರವುಂಟಾಯಿತು. ಆಗ ಆತನು:—"ಎಲಾ ನೀಚಾ, ಎಷ್ಟು ಜನರ ಗೋಣು ಮುರಿದು, ಇಷ್ಟು ಧನವನ್ನು ಸಂಗ್ರಹಿಸಿರುವೆ?" ಎಂದು ಒಮ್ಮೆಲೆ ನುಡಿದನು. ದತ್ತಾಜಿಯು ಈ ರೀತಿಯಾಗಿ ತನ್ನ ಉಪಹಾಸ ಮಾಡಿದರೂ ವೆಂಕಾಜಿಯು ಸಿಟ್ಟಿಗೇಳದೆ, ಪುನಃ ಕಾಶಿಯನ್ನು ತನಗೆ ಲಗ್ನಮಾಡಿಕೊಡೆಂದು ಕೇಳಿದನು; ಅದಕ್ಕೆ ಶುದ್ಧ ಮರಾಟಾ ರಕ್ತದ ಆ ದತ್ತಾಜಿ ವೀರನು ಮೊದಲಿಗಿಂತಲೂ ಅವನನ್ನು ಹೆಚ್ಚಾಗಿ ತಿರಸ್ಕರಿಸಿದನು. ಆಗ ವೆಂಕಾಜಿಯು ಸಿಟ್ಟಿಗೆದ್ದು, ದತ್ತಾಜಿಯ ಕೈ ಕಾಲು ಕಟ್ಟಿಸಿ, ಅವನನ್ನು ಕತ್ತಲೆಯ ಕೋಣೆಯಲ್ಲಿ ಚಲ್ಲಿಸಿದನು. ಬಳಿಕ ಆ ಕ್ರೂರನು ಕಾಶಿಯನ್ನು ಕುರಿತು:-ಕಾಶೀ, ನಿಮ್ಮಪ್ಪನ ಗತಿಯು ಹೇಗಾಗಿರುವದೆಂಬದನ್ನು ನೀನು ಪ್ರತ್ಯಕ್ಷ ನೋಡಿಯೇ ನೋಡಿರುತ್ತೀ.

ನೀವು ನನ್ನ ಕೈಯಲ್ಲಿ ಸರ್ವಸ್ವ ಸಿಕ್ಕಿರುತ್ತೀರಿ. ನನ್ನ ಮೇಲೆ ದ್ವೇಷ ಮಾಡಿ ಇನ್ನು ನೀವು ಪಾರಾಗುವಂತಿಲ್ಲ. ನಿಮ್ಮ ಅಪ್ಪನಿಗೆ ಹುಚ್ಚು ವಿಕಾರವಾಗಿರುತ್ತದೆ. ಅವನ ಗೊಡವೆ ನಿನಗೇನು? ನೀನು ಹ್ಯಾಗೂ ಪ್ರಬುದ್ಧಳಿರುತ್ತೀ; ನಿನ್ನ ಹಿತಾಹಿತಗಳು ನಿನಗೆ ತಿಳಿಯುತ್ತವೆ; ಆದ್ದರಿಂದ ನೀನೇ ವಿಚಾರ ಮಾಡು. ನೀನು ನನ್ನನ್ನು ಸಂತೋಷದಿಂದ ಲಗ್ನವಾದರೆ, ನಿಮ್ಮಪ್ಪನು ನಿನಗೆ ಮಾಡುವದೇನು? ನನ್ನ ಈ ಎಲ್ಲ ಸಂಪತ್ತಿಗೆ ನೀನೇ ಯಜಮಾನಿಯಾಗುತ್ತೀ; ನಾನು ಹೇಗೂ ನಿನ್ನ ಜಾತಿಯವನೇ ಆಗಿರತ್ತೇನೆ. ನೇತಾಜಿಯು ಹೇಳಿ ಕೇಳಿ ಬಡವನು; ಅವನನ್ನು ಮಾಡಿಕೊಂಡರೆ, ನಿನಗೆ ಸಿಗುವ ಸೌಭಾಗ್ಯವೇನು? ನಿನ್ನಂಥ ಲೋಕೋತ್ತರ ಸುಂದರಿಗೆ ನನ್ನಂಥ ವೈಭವಶಾಲಿಯಾದ ಪತಿಯೇ ಶೋಭಿಸುವನು; ನೇತಾಜಿಯಂಥ ತಿರುಕಪತಿಯು ಶೋಭಿಸುವದೆಂತು? ಯಾಕೆ, ನಿನ್ನ ಮನಸ್ಸಿನಲ್ಲಿ ಏನಿರುವದು? ಹೇಳು. ನೀನು ಒಪ್ಪಿಕೊಂಡರೆ, ನಿನ್ನ ತಂದೆಯನ್ನು ಈಗಿಂದೀಗಲೆ ಬಿಟ್ಟುಕೊಡುವೆನು” ಎಂದನು.

ವೆಂಕಾಜಿಯ ಒಂದೊಂದೇ ಮಾತುಗಳು ಕಾಶಿಯ ಕಿವಿಯಲ್ಲಿ ಕಾದ ಸೀಸದ ರಸದಂತೆ ವ್ಯಥೆಯನ್ನುಂಟುಮಾಡಹತ್ತಿದವು. ಅವನ ಮಾತು ಮುಗಿದ ಕೂಡಲೆ, ಅವಳು ಈದ ಹುಲಿಯಂತೆ ರೊಚ್ಚಿಗೆದ್ದು ನುಡಿದಳೇನಂದರೆ:—“ಮೂರ್ಖ, ಸುಮ್ಮಸುಮ್ಮನೆ ನೇತಾಜಿರಾಯರಂಥ ತೇಜಸ್ವಿ ಪುರುಷನನ್ನು ನಿಂದಿಸಿ, ನಿನ್ನ ಬಾಯಿಯನ್ನೇಕೆ ಹೊಲಸು ಮಾಡಿಕೊಳ್ಳುತ್ತೀ? ನಿನ್ನ ವೈಭವಕ್ಕೆ ಬೆಂಕೀ ಹಚ್ಚು! ಮಂದಿಯ ಗೋಣು ಮುರಿದು ತುಂಬಿಕೊಂಡ ದ್ರವ್ಯಕ್ಕೆ ವೈಭವವೆನ್ನಬಹುದೇ? ನಿನ್ನಲ್ಲಿ ವೈಭವವಿದ್ದರೆ, ಪರರ ಹೆಣ್ಣುಮಕ್ಕಳ ಮೇಲೆ ನೀನು ಹೀಗೆ ಬಲುಮೆ ಮಾಡುವದು ಎಲ್ಲಿಯ ಧರ್ಮವು? ನಾನು ಒಮ್ಮೆ ನೇತಾಜಿಯನ್ನು ಮನಸಾ ವರಿಸಿರುವೆನಾದ್ದರಿಂದ, ಆತನನ್ನು ಬಿಟ್ಟು ಉಳಿದವರು ನನಗೆ ಸೋದರ ಸಮಾನರು. ವೆಂಕಾಜಿ, ನಿನ್ನಂಥ ಮೂರ್ಖನಿಗೆ ಈ ಮಾತನ್ನು ಎಷ್ಟು ಸಾರೆ ಹೇಳಬೇಕು? ತಿರು ತಿರುಗಿ ನೀನು ಇದೇ ಮಾತನಾಡಿದರೆ, ನಿನಗೆ ಏನೆನ್ನಬೇಕು?”

ಈ ಮೇರೆಗೆ ಕಾಶಿಯು ಸಂತಾಪದಿಂದ ನುಡಿಯಲು, ವೆಂಕಾಜಿಯು ಕಾಮಾಂಧನಾಗಿ ಆಕೆಯ ಸಮೀಪಕ್ಕೆ ಹೋಗಿ:ಪ್ರಿಯೇ, ಎಂದು ಅವಳನ್ನು ಆಲಿಂಗಿಸ ಹೋದನು; ಆದರೆ ಕಾಶಿಯು ಜಾಗರೂಕತೆಯಿಂದಿದ್ದು, ತನ್ನ ಉಡಿಯಲ್ಲಿರುವ ಒಂದು ಸಣ್ಣ ಬಾಕನ್ನು ತೆಗೆದು, ಅದರಿಂದ ವೆಂಕಾಜಿಯ ಕೈಗೆ ಹೊಡೆದಳು. ಕೂಡಲೆ ವೆಂಕಾಜಿಯ ಮೊಳಕೈಗೆ ಪೆಟ್ಟುಹತ್ತಿ, ಬಳಬಳನೆ ರಕ್ತ ಸುರಿಯಿತು. ಅವನ ಸೇವಕರು ಧಾವಿಸಿ ಬಂದು ಆ ಗಾಯವನ್ನು ಕಟ್ಟಿದರು. ಕಾಶಿಯು ತನ್ನ ಸ್ಥಳಕ್ಕೆ ಹೊರಟು ಹೋದಳು. ಬಳಿಕ ಕಾಮಾಂಧನಾದ ವೆಂಕಾಜಿಯು ಕಾಶಿಯ ಸಿಟ್ಟು ಇಳಿಯಲೆಂದು, ಒಂದೆರಡು ದಿನ ಅವಳ ಉಸಾಬರಿಯನ್ನೇ ಬಿಟ್ಟುಬಿಟ್ಟನು!

§ § § § §

ಒಳ್ಳೇ ಮಧ್ಯಾಹ್ನದ ಸಮಯವು; ಬಿಸಿಲು ಅತ್ಯಂತ ಪ್ರಖರವಾಗಿತ್ತು. ಹೊರಗೆ ನೋಡಿದರೆ ಸಾಕು, ಗುಬ್ಬಿಗಳು ಬಿಸಿಲಿನ ಆ ಪ್ರಖರತೆಗೆ ತಟತಟನೆ ಹೊಡೆಯುತ್ತಿದ್ದವು. ಎಲ್ಲ ಜನರು ಗಿಡಗಳನ್ನೋ-ಮನೆಗಳನ್ನೋ ಗುಡಿ-ಗುಂಡಾರಗಳನ್ನೋ ಆಶ್ರಯಿಸಿ, ಬಿಸಿಲಿನ ತಾಪವನ್ನು ಕಡಿಮೆ ಮಾಡಿಕೊಳ್ಳುತ್ತಿದ್ದರು. ಹಕ್ಕಿ-ಪಕ್ಷಿಗಳು ಕೂಡ ಬಿಸಿಲಿಗೆ ಅಂಜಿ, ತಮ್ಮ ತಮ್ಮ ಗೂಡುಗಳನ್ನು ಆಶ್ರಯಿಸಿದ್ದವು. ಇಂಥ ಸಮಯದಲ್ಲಿ ರಾಯಗಡದ ಕೋಟೆಯ ಮೇಲೆ ನೂರಾರು ಜನ ಕೂಲಿಕಾರರು ಭರದಿಂದ ಕೆಲಸ ಮಾಡುತ್ತಿದ್ದರು. ಅವರಿಗೆ ಬಿಸಿಲಿನ ಅಂಜಿಕೆಯು ರವಷ್ಟಾದರೂ ಇದ್ದಂತೆ ಕಂಡು ಬರುತ್ತಿದ್ದಿಲ್ಲ. ಆ ಎಲ್ಲ ಜನರೂ ಸೊರಗಿ ಕಡ್ಡಿಯಂತಾಗಿದ್ದರು!

ಒಬ್ಬ ಗೋಸಾವಿಯು ಧಡ ಧಡನೆ ಕಿಲ್ಲೆಯನ್ನೇರಿ ಆ ಕೂಲಿಕಾರರು ಕೆಲಸ ಮಾಡುವಲ್ಲಿಗೆ ಹೋದನು. ಗೋಸಾವಿಯನ್ನು ದೂರಿನಿಂದ ನೋಡಿದ ಕೂಡಲೆ ಆ ಕೂಲಿಕಾರರು ಕೈಯೊಳಗಿನ ಕೆಲಸ ಬಿಟ್ಟು:—"ಮೋರಯಾ ಗೋಸಾವಿ ಮಹಾರಾಜಕೀ ಜಯ!" ಎಂದು ಜಯಘೋಷ ಮಾಡುತ್ತ, ಅವರ ಬಳಿಗೆ ಬಂದು ಸಾಷ್ಟಾಂಗ ನಮ

ಸ್ಕಾರ ಮಾಡಿದರು. ಅವರೆಲ್ಲರನ್ನೂ ಆಶೀರ್ವಾದಿಸಿ, ಗೋಸಾವಿಗಳು ನುಡಿವರೇನಂದರೆ:—ತಮ್ಮಗಳಿರಾ, ಇಂಥ ಬಿಸಿಲಿನಲ್ಲಿ ಹೇಗೆ ಕೆಲಸ ಮಾಡುತ್ತೀರಿ?

ಕೂಲಿಕಾರರು:-ಮಹಾರಾಜ, ಕೋಟೆಯು ಬೇಗನೆ ಮುಗಿಯ ಬೇಕಾಗಿದೆ; ಆದ್ದರಿಂದ ಬಿಸಿಲು-ಚಳಿಗಳೆನ್ನದೆ ಕೆಲಸ ಮಾಡುತ್ತೇವೆ.

ಗೋಸಾವಿ:—ಆದರೆ ನೀವು ಇಷ್ಟೇಕೆ ಸೊರಗಿರುತ್ತೀರಿ?

ಕೂಲಿಕಾರರು:—ಮಹಾರಾಜ, ಏನು ಹೇಳೋಣ? ಶಿವಾಜಿ ಮಹಾರಾಜರಿಗೆ ಸದ್ಯಕ್ಕೆ ದುಡ್ಡಿನ ಕೊರತೆಯಿರುತ್ತದೆ. ಆದ್ದರಿಂದ ಈಗೆರಡು ತಿಂಗಳುಗಳಿಂದ ನಮಗೆ ಸಂಬಳ ಸಿಕ್ಕಿಲ್ಲ. ಅರೆಗೂಳು ತಿಂದು ಅರೆಹೊಟ್ಟೆಯಿಂದಲೇ ಕೆಲಸ ಮಾಡುತ್ತಿದ್ದೇವೆ.

ಗೋಸಾವಿ:—ಏನಿರೋ, ಎಂಥ ದಡ್ಡರು ನೀವು? ಅರೆಗೂಳು ತಿಂದು ಈ ಪರಿ ಯಾರಾದರೂ ಲೋಕದಲ್ಲಿ ಕೆಲಸ ಮಾಡಿರುವರೇನು? ಶಿವಾಜಿಯು ಕೂಲಿಯನ್ನು ಕೊಡದಿದ್ದರೆ ನೀವು ಅವನ ಚಾಕರಿಯ ನ್ನೇಕೆ ಮಾಡಬೇಕು? ಮುಸಲ್ಮಾನ ಬಾದಶಹನ ಕಡೆಗೆ ಹೋದರೆ, ನಿಮಗೆ ಬೇಕಾದಷ್ಟು ಕೂಲಿ ಸಿಗುವದಲ್ಲ!

ಕೂಲಿಕಾರರು:—-ಛೀ, ಛೀ! ಮಹಾರಾಜ, ಅಂಥ ಮಾತುಗಳ ನ್ನಾಡಬೇಡಿರಿ. ಶಿವಾಜಿಮಹಾರಾಜರೆಂದರೆ, ಕೇವಲ ನಮ್ಮ ತಾಯಿ-ತಂದೆಗಳು. ಅವರು ನಮ್ಮ ಸಲುವಾಗಿಯೇ ತಮ್ಮ ಪ್ರಾಣವನ್ನು ಸಹ ಸಂಕಟವಲ್ಲಿ ನೂಕುತ್ತಿರುವರು. ಅವರು ಸ್ವದೇಶೋದ್ಧಾರದ ಸಲುವಾಗಿಯೇ ಈ ಕಿಲ್ಲೆಯನ್ನು ಕಟ್ಟಹಚ್ಚಿರುವರು. ಸ್ವದೇಶೋ ದ್ಧಾರದ ಕೆಲಸವೆಂದರೆ, ನಮ್ಮ ಉದ್ಧಾರದ ಕೆಲಸವೇ ಅಲ್ಲವೇ? ನಮ್ಮ ಮನೆಯ ಕೆಲಸವನ್ನು ನಾವು ಕೂಲಿ ಇಲ್ಲದೆ ಮಾಡುವದೇನಾಶ್ಚರ್ಯ? ದೇವರಿಗೆ ದಯೆ ಬರಬೇಕು; ನಮ್ಮ ಮಹಾರಾಜರಿಗೆ ವಿಪುಲ ದ್ರವ್ಯ ದೊರೆಯಬೇಕು. ನಮ್ಮ ದೇಹದಲ್ಲಿ ಎಲ್ಲಿಯ ವರೆಗೆ ಪ್ರಾಣವಿರು ವದೋ, ಅಲ್ಲಿಯ ವರೆಗೆ ನಾವು ಹೀಗೆಯೆ ಕೆಲಸ ಮಾಡುತ್ತ ಲಿರುತ್ತೇವೆ.

ಗೋಸಾವಿ (ಆನಂದದಿಂದ):-ಶಾಬಾಸ್! ಶಾಬಾಸ್!! ನಿಮ್ಮಂಥ ಸ್ವಾಮಿನಿಷ್ಠ ಜನರಿರುವದರಿಂದಲೇ ಶಿವಾಬಾನ ಸ್ವರಾಜ್ಯ ಪ್ರತಿಷ್ಠಾಪನೆಯ ಕೆಲಸವು ಭರದಿಂದ ನಡೆದಿರುತ್ತದೆ! ನಿಮ್ಮ ಜನ್ಮವು ಧನ್ಯವು! ನಿಮ್ಮಲ್ಲಿ ಈ ರೀತಿ ಸ್ವದೇಶೋದ್ಧಾರದ ಬಗ್ಗೆ ಸದ್ಬುದ್ಧಿಯನ್ನು ಹುಟ್ಟಿಸಿದ ಶಿವಬಾನೂ ಧನ್ಯನು!! ತಮ್ಮಗಳಿರಾ, ಈ ನಿಮ್ಮ ಸ್ವದೇಶಪ್ರೀತಿಯು ಸ್ಥಿರವಾಗಿರಲಿ. ನೀವು ಸ್ವದೇಶ ಸೇವೆಗೆ ಪಾತ್ರರಿರುವಿರೋ ಇಲ್ಲವೋ ಎಂಬದನ್ನು ಪರೀಕ್ಷಿಸುವದಕ್ಕಾಗಿಯೇ ಪರಮೇಶ್ವರನು ನಿಮಗೆ ಈ ರೀತಿ ಸಂಕಟಗಳನ್ನು ಒಟ್ಟು ಮಾಡಿರುವನು. ಕಷ್ಟಕಾಲದಲ್ಲಿ ನೀವು ನಿಮ್ಮ ನಿಷ್ಠೆಯನ್ನು ಬಿಡದಿದ್ದರೆ, ದೇವರು ನಿಮ್ಮ ಬಯಕೆಯನ್ನು ಕೈಗೂಡಿಸುವನು.

ಈ ಮೇರೆಗೆ ಮೋರಯಾ ಗೋಸಾವಿಗಳು ನುಡಿದು, ಅಲ್ಲಿಂದ ನೆಟ್ಟಗೆ ಶಿವಾಜಿಯಿದ್ದಲ್ಲಿಗೆ ಬಂದರು. ಅವರಿಗೆ ಮೊದಲು ಜಿಜಾಬಾಯಿಯು ಭೆಟ್ಟಿಯಾದಳು. ಆ ಸಾಧ್ವಿಯು ಗೋಸಾವಿಗಳ ಚರಣಗಳ ಮೇಲೆ ಮಸ್ತಕವನ್ನಿಟ್ಟಳು. ಅಷ್ಟರಲ್ಲಿ ಶಿವಾಜಿ ಮಹಾರಾಜರೂ ಬಂದು ಗೋಸಾವಿಗಳ ಚರಣಕಮಲಗಳ ಮೇಲೆ ಮಸ್ತಕವನ್ನಿಟ್ಟು, ಅವರ ಆಶೀರ್ವಾದವನ್ನು ಪಡೆದರು. ಬಳಿಕ ಗೋಸಾವಿಗಳು ಶಿವಬಾನ ಮುಂದೆ ಕೂಲಿಕಾರರ ದೇಶಭಕ್ತಿಯನ್ನು ವರ್ಣಿಸಿ—ಶಿವಬಾ, ನಿನ್ನ ಕೆಲಸವು ನಿಶ್ಚಯವಾಗಿ ಯಶಸ್ವಿಯಾಗುವದು! ಎಂದು ನುಡಿದರು. ಬಳಿಕ ಶಿವಾಜಿ ಮಹಾರಾಜರು ಗೋಸಾವಿಗಳ ಯೋಗಕ್ಷೇಮವನ್ನು ಕೇಳಿದರು. ಆಗ ಗೋಸಾವಿಗಳು ನುಡಿದರೇನಂದರೆ:-"ಶಿವಬಾ, ನಮಗೆ ಏನಾದರೂ ಸಂಕಟ ಪ್ರಾಪ್ತವಾದರೆ, ನಿನ್ನ ಕಡೆಗೇ ಬರುವೆವು. ನೀನು ಗೋ-ಬ್ರಾಹ್ಮಣರ ಸಂರಕ್ಷಣಕರ್ತನಾದ್ದರಿಂದ, ನಿನ್ನ ಮುಂದೆಯೆ ನಾವು ನಮ್ಮ ಸಂಕಟಗಳನ್ನು ಹೇಳಬೇಕಾಗುತ್ತದೆ. ವೆಂಕಾಜಿ ವಾಘನೆಂಬ ಒಬ್ಬ ಪುಂಡನು ನಮ್ಮ ಪ್ರಾಂತದಲ್ಲಿ ಬಹಳ ಗೊಂದಲ ನಡೆಸಿದ್ದಾನೆ. ಇಷ್ಟೇ ಅಲ್ಲ. ಮೊನ್ನೆ ಮೊನ್ನೆ ನಮ್ಮ ಗಣಪತಿ ದೇವಸ್ಥಾನದ ಮೇಲೆ ಸಹ ಅವನು ದರವಡೆಯನ್ನು ಹಾಕಿ, ದೇವಸ್ಥಾನದಲ್ಲಿಯ ಎಲ್ಲ ಸಂಪ

ತ್ತನ್ನು ಒಯ್ದುದ್ದಲ್ಲದೆ, ನಾವು ಪೂಜಿಸುವ ನಮ್ಮ ಸುವರ್ಣದ ಗಣಪತಿಯನ್ನೂ ಹರಣ ಮಾಡಿಕೊಂಡು ಹೋಗಿರುತ್ತಾನೆ. ಆ ನೀಚನಿಗೆ ದೇವಸ್ವ-ಬ್ರಹ್ಮಸ್ವಗಳೆಂದರೆ, ಪುಡಿಜೆಲ್ಲವಾಗಿ ಹೋಗಿವೆ!

ಈ ಮೇರೆಗೆ ಮೋರಯಾ ಗೋಸಾವಿಗಳು ಮಾತನಾಡಲು, ಶಿವಾಜಿಯು ವೆಂಕಾಜಿಯ ವಿಷಯದಲ್ಲಿ ಅತ್ಯಂತ ಕ್ರುದ್ಧನಾದನು. ಮೋರಯಾ ಗೋಸಾವಿಗಳೆಂದರೆ, ಆ ಕಾಲದ ಸುಪ್ರಸಿದ್ಧ ಸತ್ಪುರುಷರಾಗಿದ್ದರು. ಶ್ರೀ ರಾಮದಾಸ, ತುಕಾರಾಮ, ರಂಗನಾಥ ಮೊದಲಾದ ಸತ್ಪುರುಷರಲ್ಲಿ ಅವರ ಗಣನೆಯಾಗುತ್ತಿತ್ತು. ಅವರು ಒಳ್ಳೇ ತಪಸ್ವಿಗಳಾಗಿದ್ದರು. ಅವರ ಉಪಾಸ್ಯದೈವತವಾದ ಶ್ರೀ ಗಣಪತಿಯು ಅವರಿಗೆ ಪ್ರತ್ಯಕ್ಷಸಿದ್ಧನು. ಆದ್ದರಿಂದ ಚಿಂಚವಡದ ಮೋರಯಾ ಗೋಸಾವಿಗಳೆಂದರೆ. ಎಲ್ಲರೂ ನಯ-ಭಯಗಳಿಂದ ನಡೆದುಕೊಳ್ಳುತ್ತಿದ್ದರು; ಆದರೆ ವೆಂಕಾಜಿಯಂಥ ನೀಚರಿಗೆ ಸಾಧುಗಳೇನು,-ಅಸಾಧುಗಳೇನು? ಅವರು ಎಲ್ಲರನ್ನೂ ಒಂದೇ ದೃಷ್ಟಿಯಿಂದ ನೋಡುವವರು. ಯಾವಾಗ ವೆಂಕಾಜಿಯು ಮೋರಯಾ ಗೋಸಾವಿಗಳ ದೇವಸ್ಥಾನದ ಮೇಲೆ ದರವಡೆಯನ್ನು ಹಾಕಿದನೋ, ಆಗಲೆ ಅವರು ಅವನನ್ನು ತಮ್ಮ ಶಾಪದಿಂದ ಭಸ್ಮೀಭೂತನನ್ನಾಗಿ ಮಾಡಬಹುದಾಗಿತ್ತು; ಆದರೆ ತಪಸ್ವಿಗಳು ಕ್ಷುದ್ರವ್ಯಕ್ತಿಗಳ ಸಲುವಾಗಿ ತಮ್ಮ ತಪಸ್ಸನ್ನುಪಯೋಗಿಸುವದಿಲ್ಲ. ಲೌಕಿಕ ಉಪಾಯಗಳಿಂದಲೇ ಅವರು ದುರ್ಜನರನ್ನು ದಂಡಿಸುತ್ತಿರುವರು ಅದರಂತೆ ಮೋರಯಾ ಗೋಸಾವಿಗಳಾದರೂ ಶಿವಾಜಿಯನ್ನು ಮುಂದೆ ಮಾಡಿ, ವೆಂಕಾಜಿಯನ್ನು ಸಂಹರಿಸಬೇಕೆಂದು ಯೋಚಿಸಿ, ಅಲ್ಲಿಗೆ ಬಂದಿದ್ದರು.

ಮೋರಯಾ ಗೋಸಾವಿಗಳಂಥ ತಪಸ್ವಿಗಳಿಗೆ ವೆಂಕಾಜಿಯು ತೊಂದರೆ ಕೊಟ್ಟದ್ದಕ್ಕಾಗಿ ಶಿವಾಜಿ ಮಹಾರಾಜರಿಗೆ ವಿಲಕ್ಷಣ ಸಂತಾಪವಾಯಿತೆಂಬದನ್ನು ಹಿಂದೆ ಹೇಳಿವೆಯಷ್ಟೇ? ಕೂಡಲೆ ಆತನು ಸೈನ್ಯವನ್ನು ತಕ್ಕೊಂಡು ವೆಂಕಾಜಿಯ ಗುಹೆಯ ಮೇಲೆ ಸ್ವಾರೀ ಮಾಡಬೇಕೆಂದು ನಿಶ್ಚಯಿಸಿದನು. ಆಗ ಶಿವಾಜಿಯ ಎಲ್ಲ ಸೈನ್ಯವೂ ಲೋಹ

ಗಡದಲ್ಲೇ ಇರುತ್ತಿತ್ತು. ಆದ್ದರಿಂದ ಶಿವಾಜಿಯು ಲೋಹಗಡಕ್ಕೆ ತೆರಳಿದನು. ಇತ್ತ ಮೋರಯಾ ಗೋಸಾವಿಗಳು ಶಿವಾಜಿಯ ಈ ಕೆಲಸಕ್ಕೆ ವಿಶೇಷ ಹುರುಪು ಬಂದು, ಅವನಿಗೆ ವೆಂಕಾಜಿಯ ಮೇಲಿನ ಈ ಸ್ವಾರಿಯಿಂದ ದ್ರವ್ಯಸಹಾಯ-ಜನಸಹಾಯಗಳು ಉಂಟಾಗುವಂತೆ ಮಾಡಬೇಕೆಂದು ಒಂದು ಯುಕ್ತಿಯನ್ನು ತೆಗೆದರು. ಆಗ ಅವರು ಇಬ್ಬರು ಶೂರರಿಗೆ ಕಿನ್ನೂರಿ ಜೋಗಿಗಳ ವೇಷವನ್ನು ಹಾಕಿಸಿ, ಅವರನ್ನು ಸಂಗಡ ಕರಕೊಂಡು ವೆಂಕಾಜಿಯ ಗುಹೆಗೆ ನಡೆದರು. ಮೊದಲು ಅವರು ಕಿನ್ನೂರಿ ಜೋಗಿಗಳ ವೇಷಧಾರಿಗಳನ್ನು ದೂರ ಬಿಟ್ಟು, ಅವರಿಗೆ ಹಿಂದಿನಿಂದ ಬರಹೇಳಿ, ತಾವೊಬ್ಬರೇ ಗುಹೆಯ ವರೆಗೆ ಬಂದರು. ವೆಂಕಾಜಿಯು ಹಾಗು ಅವನ ಜನರ ಅಂಜಿಕೆಯು ಅವರಿಗೇನು? ಅವರಲ್ಲಿ ಲಂಗೋಟಿ, ಕಫನಿ ಹಾಗು ತಾಳ ಇವುಗಳ ಹೊರತು ನಾಲ್ಕನೆಯ ಪದಾರ್ಥಗಳೇ ಇದ್ದಿಲ್ಲ. ಗೋಸಾವಿಗಳು ಗುಹೆಯ ಮುಂಭಾಗದಲ್ಲಿರುವ ಒಂದು ವೃಕ್ಷದ ಬುಡದಲ್ಲಿ ಕುಳಿತು, ಗಣಪತಿಯ ಭಜನವನ್ನಾರಂಭಿಸಿದರು. ಆಗ ತಾಸೆರಡು ತಾಸು ರಾತ್ರಿಯಾಗಿದ್ದರಿಂದ, ವೆಂಕಾಜಿಯ ಜನರು ಸಂಜೆಯ ಊಟ ತೀರಿಸಿ ಹರಟೆ ಕೊಚ್ಚುತ್ತ ಕುಳಿತಿದ್ದರು. ರಾತ್ರಿಯು ತಂಪು ಹೊತ್ತು; ಅದರಲ್ಲೂ ಪ್ರೇಮಲ ಸ್ವಭಾವದ ಗೋಸಾವಿಗಳ ಪ್ರೇಮಪೂರ್ವಕವಾದ ಭಜನೆ! ಇಂದಬಳಿಕ ಕೇಳುವದೇನು? ಆ ಪ್ರದೇಶವೇ ಮಂಜುಲಶಬ್ದಮಯವಾಯಿತು! ವೆಂಕಾಜಿಯ ಜನರು ದರವಡೆಗಾರರಾಗಿದ್ದರೂ ಗೋಸಾವಿಗಳ ಮಂಜುಲ ಭಜನೆಗೆ ಮನಸೋತರು. ಅವರ ಭಜನೆಯ ಪದಗಳನ್ನು ಕೇಳಬೇಕೆಂಬ ಇಚ್ಛೆಯು ಅವರೆಲ್ಲರಿಗೂ ಉಂಟಾಯಿತು. ಆಗ ಅವರು ಒಬ್ಬೊಬ್ಬರೇ ಎದ್ದು ಬಂದು, ಗೋಸಾವಿಗಳ ಬಳಿಯಲ್ಲಿ ನೆರೆಯಹತ್ತಿದರು. ಗೋಸಾವಿಗಳ ಭಜನೆಯಂತೂ ಅಖಂಡವಾಗಿ ನಡೆದೇ ಇತ್ತು. ಅವರ ಅಭಂಗ, ದಿಂಡಿ ಮೊದಲಾದವುಗಳು ವೆಂಕಾಜಿಯ ಜನರಿಗೆ ಬಹು ಪ್ರಿಯಕರವಾದವು. ಸ್ವಲ್ಪ ಹೊತ್ತಿನಲ್ಲಿಯೇ ಗುಹೆಯೊಳಗಿನ ಎಲ್ಲ ಜನರೂ ಹೊರಬಿದ್ದು, ಗೋಸಾವಿಗಳ ಬಳಿಗೆ ಬಂದರು. ವೆಂಕಾಜಿಯು

ಕಾಶಿಯು ಮನೋಲ್ಲಾಸ್ಯದಲ್ಲಿ ಆಸಕ್ತನಾಗಿ, ಗುಹೆಯಲ್ಲೇ ಬಿದ್ದು ಕೊಂಡಿದ್ದನು. ಅವನ ಒಬ್ಬಿಬ್ಬರು ಸೇವಕರು ಮಾತ್ರ ಅವನ ಸನ್ನಿಧಿ ಯಲ್ಲಿದ್ದರು.

ಹೀಗೆ ಮೋರಯಾ ಗೋಸಾವಿಗಳು ಆ ದರವಡೆಗಾರರ ಚಿತ್ತ ವನ್ನು ಹರಣ ಮಾಡಲು, ಅವರಲ್ಲಿಯ ಕೆಲವರು ಹಿಲಾಲುಗಳನ್ನು ಹಚ್ಚಿ ಬೆಳಕು ಮಾಡಿದರು. ಅಷ್ಟರಲ್ಲಿ ಆ ಇಬ್ಬರು ಕಿನ್ನೂರಿ ಜೋಗಿ ಗಳೂ ಅಲ್ಲಿಗೆ ಬಂದು, ಗೊಸಾವಿಗಳಿಗೆ ನಮಸ್ಕರಿಸಿ ಕುಳಿತರು. ಆಗ ಗೋಸಾವಿಗಳು ಅವರನ್ನು ಕುರಿತು:—"ನೀವು ಯಾರು?" ಎಂದು ಪ್ರಶ್ನೆ ಮಾಡಿದರು. ಅದಕ್ಕೆ ಅವರು:—"ಮಹಾರಾಜ, ನಾವು ಕಿನ್ನೂರಿ ಜೋಗಿಗಳು; ಲಾವಣಿ, ದಿಂಡಿ ಮೊದಲಾದ ಪದಗಳನ್ನು ಹೇಳಿ ಜನರ ಮನೋರಂಜನ ಮಾಡಿ ಹೊಟ್ಟೆ ತುಂಬಿಕೊಳ್ಳುವದಕ್ಕಾಗಿ ಅಡ್ಡಾಡುತ್ತಿರುತ್ತೇವೆ" ಎಂದರು. ಕೂಡಲೆ ಗೋಸಾವಿಗಳು ಸಂತೋಷ ವನ್ನು ವ್ಯಕ್ತಗೊಳಿಸಿ:—"ಹಾಗಾದರೆ ಬಹಳ ನೆಟ್ಟಗಾಯಿತು. ಸುಂದರ ವಾದ ಲಾವಣಿಯನ್ನು ಹೇಳಿ, ಈ ಜನರ ಮನಸ್ಸನ್ನು ಸಂತೋಷ ಗೊಳಿಸಿರಿ" ಎಂದು ನುಡಿಯಲು, ಜೋಗಿಗಳು ಅದಕ್ಕೆ ಒಪ್ಪಿ:— "ಮಹಾರಾಜ, ಈ ಸರದಾರರು ಒಳ್ಳೇ ಕೊಡಗೈಯವರಾದ್ದ ರಿಂದ, ನಾವು ಈ ಮೊದಲು ಒಂದೆರಡು ಸಾರೆ ಇಲ್ಲಿ ಲಾವಣಿಗಳನ್ನು ಹೇಳಿರುತ್ತೇವೆ." ಎಂದು ನುಡಿದು, ಕಿನ್ನೂರಿಯನ್ನು ಸಜ್ಜುಗೊಳಿಸಿ ಪದಗಳನ್ನು ಹೇಳಲುಪಕ್ರಮಿಸಿದರು. ಅವರು ಹೇಳಿದ ಪದಗಳ ಭಾವವೇನೆಂಬದನ್ನು ನಮ್ಮ ವಾಚಕರಿಗಾಗಿ ಹೇಳುವೆವು:—"ಕಲಿ ಕಾಲವು ಕಠಿಣವಾಯಿತು. ಕರ್ಮ-ಧರ್ಮಗಳು ವಿಪರೀತವಾದವು. ಪಾಂಡವರು ಹೋದರು. ರಜಪುತ ರಾಜರು ಗತಿಸಿದರು. ಎಲ್ಲೆಲ್ಲಿಯೂ ಯವನ ಭೂಪತಿಗಳು ಹರಿಬಿದ್ದರು. ಗೋ-ಬ್ರಾಹ್ಮಣ ಮೊದಲಾದ ಸಾಧು ಜೀವಿಗಳ ಗೋಳು ಹೆಚ್ಚಿತು. ಪತಿವ್ರತೆಯರ ಕಣ್ಣೀರಿನಿಂದ ಧರಣಿಯು ಪ್ರತಿಕ್ಷಣದಲ್ಲಿಯೂ ನೆನೆಯುಹತ್ತಿತು. ಜನರು ದೇವರಿಗೆ ಶರಣು ಹೋದರು. ಅಂಬಾಭವಾನಿಯು ಪತಿಯನ್ನು ಎಚ್ಚರಿಸಿದಳು.

ಶಂಕರನು ಗಡಬಡಿಸಿ ದುಷ್ಟರನ್ನು ಸಂಹರಿಸುವದಕ್ಕೆ ಹೊರಹೊರಟನು. ಶಿವನೇರಿಯ ಜಿಜಾಬಾಯಿಯು ಮಹಾ ಸಾಧ್ವಿಯು. ಶಂಕರನು ಅಲ್ಲಿ ಹುಟ್ಟಿ ಬಂದನು. ಸರ್ವರೂ ಇದನ್ನು ಮನಗಾಣಬೇಕು. ಅಹಹಾ! ಶಂಕರನ ಭಕ್ತವಾತ್ಸಲ್ಯವು ಎಷ್ಟು ದೊಡ್ಡದು! ದುಷ್ಟರ ಚಂಡುಗಳನ್ನು ಈಡಾಡಹತ್ತಿರುವನು! ಜನರು ದಂಗು ಬಡಿದು ನಿಂತಿರುವರು! ಎಲ್ಲೆಲ್ಲಿಯೂ ಶಿವರಾಯನ ಜಯಘೋಷವು ನಡೆಯುತ್ತಿರುವದು! ವೀರರೇ, ಆಸ್ಥೆಯಿಂದ ಕೇಳಿರಿ. ತಡಮಾಡದೆ ಶಿವರಾಯನನ್ನು ಕೂಡಿಕೊಳ್ಳಿರಿ. ಗೋ-ಬ್ರಾಹ್ಮಣರನ್ನು ಸಂರಕ್ಷಿಸಿರಿ. ಸ್ವಜನರನ್ನು ಸಂಕಟಗಳಿಂದ ಬಿಡಿಸಿರಿ. ವೆಂಕಾಜಿಯ ಸಂಗತಿಯಿಂದ ಸ್ವಜನದ್ರೋಹಿಗಳಾಗಿ ಕೆಡಬೇಡಿರಿ. ಪಾಪದ ಪರ್ವತವನ್ನು ತಲೆಯ ಮೇಲೆ ಹೊತ್ತುಕೊಳ್ಳಬೇಡಿರಿ. ದುರುಳ ವೆಂಕಾಜಿಯನ್ನು ದೂಡಿರಿ. ಶಿವರಾಯನನ್ನು ಆದರಿಸಿರಿ. ಅಕ್ಕ-ತಂಗಿಯರ ಮಾನ ಉಳಿಸಿರಿ. ಇದೇ ಸತ್ಯಧರ್ಮವೆಂದು ತಿಳಿಯಿರಿ.''

ಈ ರೀತಿಯಾಗಿ ಕಿನ್ನೂರಿ ಜೋಗಿಗಳು ಆ ಜನರನ್ನು ಜಾಗೃತಗೊಳಿಸಲು, ವೆಂಕಾಜಿಯಲ್ಲಿ ಕೇವಲ ಅನುರಕ್ತರಾದ ಆತನ ಮೂವರು-ನಾಲ್ವರು ಸ್ನೇಹಿತರಿಗೆ ಕೋಪಾವೇಶವು ಹೆಚ್ಚಿತು. ಉಳಿದವರು ಜೋಗಿಗಳ ಧೈರ್ಯಕ್ಕೆ ಅಚ್ಚರಿಪಡುತ್ತ, ತಾವು ಶಿವಾಜಿ ಮಹಾರಾಜರನ್ನೇ ಕೂಡಿಕೊಳ್ಳಬೇಕೆಂದು ನಿಶ್ಚಯಿಸಲಾರಂಭಿಸಿದರು. ಅಷ್ಟರಲ್ಲಿ ಕೋಪಿಷ್ಠರಾದ ವೆಂಕಾಜಿಯ ಆ ಸ್ನೇಹಿತರು ಜೋಗಿಗಳ ಮೇಲೆ ಏರಿಹೋದರು. ಆಗ ಗೋಸಾವಿಗಳು ಮುಂದರಿದು:—''ನಿಮ್ಮಿಂದ ಈ ಜೋಗಿಗಳ ಕೂದಲಿಗೆ ಧಕ್ಕೆ ಹತ್ತಿದರೆ, ನಿಮ್ಮ ನೂರು ವರ್ಷಗಳು ತುಂಬಿದವೆಂದೇ ತಿಳಿಯಿರಿ. ಎಚ್ಚರಿಕೆ! ಎಚ್ಚರಿಕೆ!!'' ಎಂದು ಗದ್ದರಿಸಿದರು. ಜೋಗಿಗಳೂ ತಮ್ಮ ಟೊಂಕದಲ್ಲಿಯ ಖಡ್ಗಗಳನ್ನು ಹಿರಿದು ಸಜ್ಜಾಗಿ ನಿಂತರು.

---

# ಪೂಜ್ಯಪಾದಗಳ ದರ್ಶನ!

ಈ ಪ್ರಕಾರ ಗುಹೆಯ ಮುಂಭಾಗದಲ್ಲಿ ಗೊಂದಲವು ನಡೆಡಿರಲು, ಇತ್ತ ಗುಹೆಯಲ್ಲಿ ಏನು ನಡೆದಿದೆಯೆಂಬದನ್ನು ನೋಡುವಾ ನಡೆಯಿರಿ. ಇಂದು ವೆಂಕಾಜಿಯು ಅಂತ್ಯಂತ ಕಾಮೋದ್ದೀಪ್ತನಾಗಿದ್ದನು. ಗೋಸಾವಿಯ ಭಜನವನ್ನು ಕೇಳಲಿಕ್ಕೆ ತನ್ನ ಜನರೆಲ್ಲರೂ ಹೊರಟು ಹೋಗಲು, ಅವನಿಗೆ ಆ ಏಕಾಂತದಲ್ಲಿ ಕಾಶಿಯ ಉಪಭೋಗವನ್ನು ಬಲಾತ್ಕಾರದಿಂದಾದರೂ ತಕ್ಕೊಳ್ಳಬೇಕೆಂಬ ಪ್ರಬಲೇಚ್ಛೆಯುಂಟಾಯಿತು. ಕೂಡಲೆ ಅವನು ತನ್ನ ಬಳಿಯಲ್ಲಿ ಕಾಲು ಒತ್ತುತ್ತ ಕುಳಿತಿದ್ದ ಸೇವಕರಿಗೆ ಕಾಶಿಯನ್ನೂ, ದತ್ತಾಜಿಯನ್ನೂ ಕರೆತರಲು ಆಜ್ಞಾಪಿಸಿದನು. ಅಪ್ಪಣೆಯ ಮೇರೆಗೆ ಅವರು ಕಾಶಿಯನ್ನೂ ದತ್ತಾಜಿಯನ್ನೂ ಕರೆತಂದು ನಿಲ್ಲಿಸಿದರು. ಆಗ ವೆಂಕಾಜಿಯು ದತ್ತಾಜಿಯನ್ನು ಕುರಿತು:—ದತ್ತಾಜೀ, ಇದೇ ನಿನ್ನ ಕೊನೆಯ ದಿನವು. ನೀನು ಇಂದು ಹಾದಿಗೆ ಬಂದೀ, ನಾಳೆಗೆ ಹಾದಿಗೆ ಬಂದೀ, ಎಂದು ಇಂದಿನ ವರೆಗೆ ಕೈ ಕಾಯುತ್ತ ಬಂದೆನು. ನೀನು ನಿನ್ನ ಚಂಡಿತನವನ್ನು ಬಿಡಲೇ ಇಲ್ಲ. ದತ್ತಾಜೀ, ಈಗ ಈ ಕ್ಷಣಕ್ಕೆ ನಿನ್ನ ಮನಸ್ಸು ಹೇಗಿರುವದೆಂಬದನ್ನು ಹೇಳು. ಕಾಶಿಯನ್ನು ಸಂತೋಷದಿಂದ ನನಗೊಪ್ಪಿಸಲಿಕ್ಕೆ ನಿನ್ನ ಇಚ್ಛೆಯಿಲ್ಲದಿದ್ದರೂ ನಾನು ಬಿಡುವದಿಲ್ಲ. ಇದನ್ನು ನೀನು ಸೆರಗಿಗೆ ಗಂಟು ಹೊಡೆದುಕೋ. ಸುಮ್ಮನೆ ಪ್ರಾಣಕ್ಕೆ ಎರವಾಗಬೇಡ, ಎಂದು ನುಡಿಯಲು, ಕತ್ತಲೆಯ ಕೋಣೆಯಲ್ಲಿ ಎರಡು ದಿನಗಳ ವರೆಗೆ ಕೂಳಿಲ್ಲದೆ ಬಿದ್ದಿದ್ದ ದತ್ತಾಜಿಗೆ ಹೇಳಕೂಡದಷ್ಟು ಸಂತಾಪವಾಯಿತು! ಆತನು ಅವಡುಗಚ್ಚಿ, ವೆಂಕಾಜಿಯ ಮೈಮೇಲೆ ಹೋಗಿ, ಅವನ ಗಂಟಲು ಸೀಳಬೇಕೆಂದು ಹವಣಿಸಿದನು; ಆದರೆ ಬಲಿಷ್ಠನಾದ ವೆಂಕಾಜಿಯ ಮುಂದೆ ಆತನ ಆಟ ಸಾಗಲಿಲ್ಲ. ವೆಂಕಾಜಿಯು ದತ್ತಾಜಿಯ ಕೈಗಳನ್ನು ಗಟ್ಟಿಯಾಗಿ ಹಿಡಿದು, ಸೇವಕರಿಂದ ಅವನನ್ನು ಪ್ರತಿಬಂಧಿಸಿದನು. ದತ್ತಾಜಿಯು ಆ ಪರಾಧೀನ ಸ್ಥಿತಿಯಲ್ಲಿಯೂ ವೆಂಕಾಜಿಯನ್ನು

ಬಾಯಿಗೆ ಬಂದಂತೆ ಬೈಯಲಾರಂಭಿಸಿದನು. ಬಳಿಕ ಆ ಕಾಮಾಂಧನು ದತ್ತಾಜಿಯನ್ನು ಬಿಟ್ಟುಕೊಟ್ಟು, ಕಾಶಿಯ ಕಡೆಗೆ ಹೊರಳಿ:— "ಕಾಶೀ, ಇನ್ನಾದರೂ ವಿಚಾರ ಮಾಡು. ದೇವರು ಕಾಯುವನೆಂದು ಹಗಲೆಲ್ಲ ಅನ್ನುತ್ತೀಯಲ್ಲ! ಅದಾವ ದೇವರು ಈಗ ನಿನ್ನ ಸಹಾಯಕ್ಕೆ ಬರುವನೆಂಬದನ್ನು ನೋಡುತ್ತೇನೆ. ಪ್ರತ್ಯಕ್ಷ ಮೋರಯಾ ಗೋಸಾವಿಗಳ ಉಪಾಸ್ಯ ದೈವತವಾದ ಸುವರ್ಣ ಗಣಪತಿಯು ನನ್ನ ಕಾಲ ಕೆಳಗೆ ಉರಳಾಡುತ್ತಿರುವನು! ತಿಳಿಯಿತೇ. ನೀನು ಒಪ್ಪಿಕೊಳ್ಳದಿದ್ದರೆ, ನಿನ್ನ ತಂದೆಯ ಕೈ ಕಾಲು ಕತ್ತರಿಸಿ ಚೆಲ್ಲುವೆನು. ಬಳಿಕ ಅವನೆದುರಿಗೇ ನಿನ್ನನ್ನು ಬಲಾತ್ಕಾರದಿಂದ ಉಪಭೋಗಿಸಿ, ನನ್ನ ಕಾಮೇಚ್ಛೆಯನ್ನು ತೃಪ್ತಿಪಡಿಸಿಕೊಳ್ಳುವೆನು........"

ವೆಂಕಾಜಿಯು ಇನ್ನೂ ಏನೇನೋ ಅನ್ನುತ್ತಿದ್ದನು. ಅಷ್ಟರಲ್ಲಿ ದತ್ತಾಜಿಯು ನಡುವೇ ಅವನ ಮಾತಿಗೆ ಭಂಗವನ್ನುಂಟು ಮಾಡಿ ನುಡಿದನೇನಂದರೆ:—"ಕಾಶೀ, ನೀನು ಈ ಚಾಂಡಾಲನ ಬೆದರಿಕೆಗೆ ಅಂಜಿಕೊಂಡೀ. ನೀನು ಯಾವ ಮನೆತನದವಳೆಂಬದನ್ನು ಲಕ್ಷ್ಯದಲ್ಲಿಡು. ಈ ಚಾಂಡಾಲನು ಬೇಕಾದ ರೀತಿಯಿಂದ ನನ್ನನ್ನು ಹಿಂಸೆಬಡಿಸಿದರೂ, ನೀನು ನಿನ್ನ ಕುಲ-ಶೀಲಗಳನ್ನು ಮರೆಯಲಿಕ್ಕಾಗದು."

ದತ್ತಾಜಿಯು ಆವೇಶದಿಂದ ಹೀಗೆ ಮಾತಾಡಲು, ಕಾಶಿಯು:- "ಅಪ್ಪಾ, ಈ ಕಾಶಿಯು ಅಬಲೆಯಾದರೂ, ತನ್ನ ಪಾತಿವ್ರತ್ಯ ಪ್ರಭಾವದಿಂದ ಈಗ ಸಬಲೆಯಾಗಿರುವಳು. ಇಂಥ ನೂರಾರು ಜನ ವೆಂಕಾಜಿಗಳು ಬಂದರೂ ಈಕೆಯು ತನ್ನ ಕುಲ-ಶೀಲಗಳನ್ನು ಬಿಡದೆ, ಮರಾಟಾ ಸ್ತ್ರೀಯರ ಕೋಪಾಗ್ನಿಯು ಎಷ್ಟು ಜಾಜ್ವಲ್ಯವಾಗಿರುತ್ತದೆಂಬದನ್ನು ತೋರಿಸದೆ ಬಿಡಲಿಕ್ಕಿಲ್ಲ. ಪತಿವ್ರತೆಯರ ಮಾನಕಾಯಲಿಕ್ಕೆ ಸಮರ್ಥನಾದ ಭಗವಂತನ ಬೆಂಬಲವು ಇದ್ದೇ ಇರುತ್ತದೆ. ಅಪ್ಪಾ, ನನ್ನ ವಿಷಯವಾಗಿ ನಿನಗೂ ಸಂಶಯವೇ?" ಎಂದಳು.

ತಂದೆ-ಮಕ್ಕಳಲ್ಲಿ ಈ ರೀತಿ ಸಂಭಾಷಣ ನಡೆದಿರಲು, ವೆಂಕಾಜಿಯು ಮತ್ತೊಮ್ಮೆ ಗದ್ದರಿಸಿ:—"ಕಾಶೀ, ಸಾಕು ಮಾಡು ನಿನ್ನೀ

ಬಿಂಕವನ್ನು. ಆದಾವ ದೇವನು ನಿನ್ನ ಸಹಾಯಕ್ಕೆ ಬರುತ್ತಾನೋ ಬರಲಿ, ನೋಡುತ್ತೇನೆ" ಎಂದು ನುಡಿಯುತ್ತ ಕಾಶಿಯ ಸಮೀಪಕ್ಕೆ ಹೋದನು. ಕಾಶಿಯು ಅತ್ಯಂತ ಕ್ರುದ್ಧಳಾಗಿ ಪ್ರತ್ಯಕ್ಷ ಶಕ್ತಿಯ ಅವತಾರವನ್ನು ತಾಳಿರುವಳೋ ಏನೋ ಎಂಬಂತೆಯೂ, ಕೆಂಗಣ್ಣುಗಳಿಂದ ಕಿಡಿಗಳನ್ನು ಬಿಡುತ್ತಿರುವಂತೆಯೂ ತಟಸ್ಥಳಾಗಿ ನಿಂತುಕೊಂಡಿದ್ದಳು. ಇನ್ನು ವೆಂಕಾಜಿಯು ಕಾಶಿಯ ಕೈಯನ್ನು ಹಿಡಿಯತಕ್ಕವನು; ಅಷ್ಟರಲ್ಲಿ ಗುಹೆಯ ದಕ್ಷಿಣ ಮೂಲೆಯಿಂದ:—"ಎಲೈ ಕಳ್ಳನೇ, ಕಾಶಿಗೆ ಸಹಾಯಕನಾದ ದೇವರನ್ನು ನೋಡುತ್ತೀಯಾ? ನೋಡು, ಚೆನ್ನಾಗಿ ಕಣ್ಣು ತೆಗೆದು ನೋಡು" ಎಂದು ಯಾರೋ ಗದ್ದರಿಸಿದಂತಾಯಿತು. ವೆಂಕಾಜಿಯು ಮೆಟ್ಟಿಬಿದ್ದು ಅತ್ತ ಕಡೆಗೆ ನೋಡುತ್ತಿರಲು, ಒಂದು ಭವ್ಯವಾದ ಮೂರ್ತಿಯು ಆತನೆದುರಿಗೆ ಬಂದು ನಿಂತುಕೊಂಡಿತು!

ಆ ಮೂರ್ತಿಯು ಆಗಿನ ಕಾಲದಲ್ಲಿ ಅತ್ಯುಗ್ರವಾಗಿ ತೋರುತ್ತಿತ್ತು. ಆ ಮೂರ್ತಿಯ ಕೈಯಲ್ಲಿ ಒಂದು ನಿಡಿದಾದ ಖಡ್ಗವಿತ್ತು. ಆ ಮೂರ್ತಿಯು ಅವಡುಗಚ್ಚುತ್ತ, ವೆಂಕಾಜಿಯನ್ನು 'ಒಂದು ಕಡಿತ, ಎರಡು ತುಂಡು' ಮಾಡುತ್ತದೋ ಏನೋ ಎಂಬಂತೆ ತೋರುತ್ತಿತ್ತು. ಆ ಮೂರ್ತಿಯನ್ನು ನೋಡಿ ವೆಂಕಾಜಿಗೆ ಭಯವುಂಟಾಯಿತು. ಕಾಶಿಗೆ ಆನಂದವಾಯಿತು. ಆಗ ಆ ಮೂರ್ತಿಯು:—"ಎಲೇ ಕಳ್ಳಾ, ಯಾಕೆ ದೆವ್ವ ಬಡಿದಂತೆ ನಿಂತಿರುವೆ? ಕಾಶಿಯನ್ನು ನಿನ್ನ ದವಡೆಯೊಳಗಿಂದ ಬಿಡಿಸಲಿಕ್ಕೆ ದೇವರೇ ನನ್ನನ್ನು ಕಳಿಸಿರುವನು ನನಗೆ ನೇತಾಜಿಯೆನ್ನುವರು. ನಿನ್ನಲ್ಲಿ ಸಾಮರ್ಥ್ಯವಿದ್ದದ್ದೇ ಆದರೆ, ಬಾ ಮುಂದಕ್ಕೆ" ಎಂದು ನುಡಿಯಿತು.

'ನೇತಾಜಿ' ಎಂಬ ಶಬ್ದವನ್ನು ಕೇಳಿದ ಕೂಡಲೆ ವೆಂಕಾಜಿಯ ಅಂಗಾಲೊಳಗಿನ ಉರಿಯು ನಡುನೆತ್ತಿಯವರೆಗೆ ಒಮ್ಮೆಲೆ ಪ್ರಜ್ವಲಿಸಿತು! ಅವನು ತನ್ನ ಜನರನ್ನು ಕೂಗಿ ಕೂಗಿ ಕರೆಯಲಾರಂಭಿಸಿದನು. ಆಗ ನೇತಾಜಿಯು ನಕ್ಕು:-ಮೂರ್ಖ, ಮರಾಟರು ಒಳಗೆ ಬರಬೇಕಾದರೆ ನಿನ್ನ ಜನರ ವ್ಯವಸ್ಥೆ ಮಾಡದೆ ಬಂದಿರುವರೆಂದು ತಿಳಿದಿರುವೆಯಾ?

ಎಂದು ನುಡಿಯುತ್ತಿರಲು, ನಾಲ್ಕಾರು ಜನ ಮರಾಟರು ಬಂದು ವೆಂ-ಕಾಜಿಯನ್ನು ಬಿಗಿದು ಕಟ್ಟಿದರು. ಆಗ ನೇತಾಜಿಯು ಅಲ್ಲಿಗೆ ಬಂದನು. ತಮ್ಮನ್ನು ಬಂಧಮುಕ್ತನನ್ನಾಗ ಮಾಡಿದ್ದಕ್ಕೆ ದತ್ತಾಜಿಗೂ ಕಾಶಿಗೂ ಆದ ಆನಂದವನ್ನು ವರ್ಣಿಸಲಳವಲ್ಲ!

ಪ್ರಿಯವಾಚಕರೇ, ನೇತಾಜಿಯು ಆ ಗುಹೆಗೆ ಆಕಸ್ಮಿಕವಾಗಿ ಹೇಗೆ ಬಂದನೆಂಬ ಬಗ್ಗೆ ನಿಮಗೆ ಶಂಕೆಯುಂಟಾಗಿರಬಹುದು; ಆದರೆ ರಾಮಜಿಯು ಎರಡು ನೂರು ಜನ ಮರಾಟರನ್ನು ಕೂಡಿಸಿಕೊಂಡು ಬಂದು, ವೆಂಕಾಜಿಯ ಪಾರುಪತ್ಯ ಮಾಡುತ್ತೇನೆಂದು ದತ್ತಾಜಿಯ ಮುಂದೆ ಹೇಳಿ ಹೋದ ಸಂಗತಿಯನ್ನು ಸ್ಮರಿಸಿದರೆ ಆ ಶಂಕೆಯು ಸಮಾಧಾನವಾಗುವದು. ನೇತಾಜಿಯು ರಾಮಜಿಯ ಗುಡಿಸಿಲಿಗೆ ಬಂದಾಗ ಅಲ್ಲಿ ನೆರೆದ ಗದ್ದಲವು ಈ ಜನರದೇ ಆಗಿತ್ತು. ಆತನು ದತ್ತಾಜಿಗೆ ವಚನಕೊಟ್ಟಂತೆ ಎರಡು ನೂರು ಜನ ಮರಾಟರನ್ನು ಕೂಡಿಸಿ ಅವರಿಗೆ ವೆಂಕಾಜಿಯ ಮೇಲೆ ಹೇಗೆ ಸ್ವಾರೀ ಮಾಡಬೇಕೆಂಬದನ್ನು ತಿಳಿಸಿ ಹೇಳುತ್ತಿದ್ದನು. ಅಂಥ ಹೊತ್ತಿನಲ್ಲಿ ನೇತಾಜಿಯೂ, ನಾನಾಜಿಯೂ ಬಂದುದರಿಂದ, ರಾಮಜಿಗೆ ಅತ್ಯಂತ ಹರುಷವಾಯಿತು. ಅವನು ನೇತಾಜಿಯನ್ನು ಒಳಗೆ ಕರೆದುಕೊಂಡು ಹೋದ ಬಳಿಕ ಆತನಿಗೆ ಎಲ್ಲ ಸಂಗತಿಗಳನ್ನೂ ಹೇಳಿದನು. ಕಾಶಿಯೂ, ದತ್ತಾಜಿಯೂ ವೆಂಕಾಜಿಯೆಂಬ ದರವಡೆಗಾರನ ಸೆರೆಯಲ್ಲಿ ಸಿಕ್ಕರೆಂಬ ಸುದ್ದಿಯನ್ನು ಕೇಳಿ, ನೇತಾಜಿಯು ಸಿಟ್ಟಿನಿಂದ ತಪ್ತನಾದನು. ಆತನು ಚಟ್ಟನೆ ಎದ್ದು ನಿಂತು, ಈಗಲೆ ವೆಂಕಾಜಿಯ ಮೇಲೆ ಸ್ವಾರೀ ಮಾಡೋಣವೆಂದು ಅಂದನು. ಆಗ ರಾಮಜಿಯು ವಾಘನ ಸೈನ್ಯವನ್ನೂ ಅವನ ಸ್ಥಳದ ಭದ್ರತೆಯನ್ನೂ ಸಂಪೂರ್ಣವಾಗಿ ಹೇಳಲು, ನೇತಾಜಿಯು ರಾಮಜಿಯ ಸೂಚನೆಯಂತೆ ಮರುದಿನ ಅವನ ಮೇಲೆ ಸ್ವಾರೀ ಮಾಡಲಿಕ್ಕೆ ಒಪ್ಪಿಕೊಂಡನು

ರಾಮಜಿಯು ಕೂಡಿಸಿದ ದಂಡಿಗೆ ನೇತಾಜಿಯೇ ನಾಯಕನಾದನು. ಕೆಲವರಲ್ಲಿ ಬಲವಾದ ಖಡ್ಗಗಳಿದ್ದುವು; ಕೆಲವರಲ್ಲಿ

ಸಾಧಾರಣ ಖಡ್ಗಗಳಿದ್ದವು. ಖಡ್ಗಗಳಿಲ್ಲದವರು ಬರ್ಚಿ, ಕೊಡ್ಲಿ ಮೊದಲಾದ ಆಯುಧಗಳನ್ನು ತಕ್ಕೊಂಡಿದ್ದರು. ಈ ಬಗೆಯ ಸೈನ್ಯವನ್ನು ತಕ್ಕೊಂಡು ನೇತಾಜಿಯು ವೆಂಕಾಜಿಯ ಗುಹೆಗೆ ಹೋದನು. ಆ ಗುಹೆಗೆ ದಕ್ಷಿಣ ಭಾಗದಲ್ಲಿ ಒಂದು ಬಾಗಿಲವಿದ್ದು, ಆ ಬಾಗಿಲವನ್ನು ವಾಘನು ಎಂದೋ ಕಲ್ಲುಗಳಿಂದ ಮುಚ್ಚಿಸಿದ್ದನು. ಗುಹೆಯನ್ನು ಚೆನ್ನಾಗಿ ನೋಡಿದವನಾದ ರಾಮಜಿಯು, ಮೊದಲು ಎಲ್ಲ ಜನರನ್ನೂ ಅಲ್ಲಿಗೆ ಕರೆದುಕೊಂಡು ಹೋದನು; ಮತ್ತು ಗದ್ದಲವಾಗದಂತೆ ಆ ಕಲ್ಲುಗಳನ್ನು ಕಿತ್ತು ತೆಗೆದು, ಮಾರ್ಗವನ್ನು ಮಾಡಿಸಿದನು. ವೆಂಕಾಜಿಯು ಕಾಮಾಂಧನಾಗಿ ಕಾಶಿಯ ಕೈ ಹಿಡಿಯಲಿಕ್ಕೆ ಹೋದಾಗ ನೇತಾಜಿಯು ಆ ಬಾಗಿಲದಿಂದಲೇ ಒಳಗೆ ಬಂದು, ಹಿಂದೆ ಹೇಳಿದಂತೆ ಅವನನ್ನು ಸೆರೆ ಹಿಡಿದನು.

ಗುಹೆಯಲ್ಲಿ ಮರಾಟರಿಗೆ ಯಾರೂ ಎದುರಾಗದ್ದರಿಂದ ರಾಮಜಿ, ನಾನಾಜಿ ಮೊದಲಾದವರು ಗುಹೆಯ ಮುಖ್ಯ ಬಾಗಿಲಿಗೆ ಬಂದರು. ನೂರಾರು ಮೊಳ ಅಂತರದಲ್ಲಿ ಬಹಳ ಜನರು ನೆರೆದಿದ್ದು, ಏನೋ ಗೊಂದಲ ನಡೆದಂತೆ ಕಾಣುತ್ತಿತ್ತು. ಕೂಡಲೆ ಅವರು ತಮ್ಮ ಜನರೊಂದಿಗೆ ಅಲ್ಲಿಗೆ ಹೋಗಲು, ಶಿವಾಜಿ ಮಹಾರಾಜರ ದಂಡು ವೆಂಕಾಜಿಯ ಜನರನ್ನೆಲ್ಲ ಮುತ್ತಿದಂತೆ ಕಂಡು ಬಂದಿತು. ಆಗ ರಾಮಜಿಯು ಗುಹೆಗೆ ತಿರುಗಿ ಬಂದು ನೇತಾಜಿಗೆ ಭೆಟ್ಟಿಯಾದನು. ಇಷ್ಟೊತ್ತಿಗೆ ನೇತಾಜಿಯು ವೆಂಕಾಜಿಯನ್ನು ಪ್ರತಿಬಂಧಿಸಿದ್ದನು. ರಾಮಜಿಯು ಬರಲು, ನೇತಾಜಿಯು ಆತನನ್ನು ಕುರಿತು: "ರಾಮಜಿ, ಹೊರಗಿನ ಸ್ಥಿತಿಯು ಹೇಗಿರುವದು?" ಎಂದನು. ಆಗ ರಾಮಜಿಯು:—"ನೇತಾಜೀ, ದೇವರು ಇಂದು ಒಳ್ಳೇ ಸುಯೋಗವನ್ನು ಕೂಡಿಸಿಕೊಟ್ಟಿರುವನು. ಶಿವಾಜಿ ಮಹಾರಾಜರೂ ಮೊರಯಾ ಗೋಸಾವಿಗಳೂ ಇಂದೇ ವಾಘನ ಸಮಾಚಾರವನ್ನು ತಕ್ಕೊಳ್ಳುವದಕ್ಕೆ ಸೈನ್ಯದೊಡನೆ ಇಲ್ಲಿಗೇ ಬಂದಿದ್ದು, ಅವರು ವಾಘನ ಜನರನ್ನೆಲ್ಲ ಹಂಚಿಕೆಯಿಂದ ಪ್ರತಿಬಂಧಿಸಿರುತ್ತಾರೆ" ಎಂದಂದನು. ಶಿವಾಜಿ ಮಹಾರಾಜರು ಅಲ್ಲಿಗೆ ಸ್ವತಃ

ಬಂದಿರುವರೆಂಬದನ್ನು ಕೇಳಿ, ನೇತಾಜಿಯ ಶ್ರವಣಸಂಪುಟವೂ, ಹೃತ್ಕಮಲವೂ ಅರಳಿದವು! ಯಾವ ಪುಣ್ಯಪುರುಷನ ಭೆಟ್ಟಿಗೆ ಹೋಗ ಬೇಕೆಂದು ನೇತಾಜಿಯು ಮನೆಯಿಂದ ಹೊರಬಿದ್ದಿದ್ದನೋ, ಆ ಮಹಾ ಪುರುಷನು ಇಂಥ ವಿಜಯ ಸಮಯದಲ್ಲಿ ತಾನಾಗಿಯೇ ಬಂದಿರುವ ನೆಂಬದನ್ನು ಕೇಳಿದ ಬಳಿಕ ಆತನ ಆನಂದಕ್ಕೆ ಮೇರೆ ಉಳಿಯದಿದ್ದದ್ದು ಆಶ್ಚರ್ಯವಲ್ಲ! ಆಗ ಆತನು ವೆಂಕಾಜಿಯು ದ್ರವ್ಯವನ್ನು ಹರಣ ಮಾಡಿ ಮಹಾರಾಜರ ಚರಣಕ್ಕರ್ಪಿಸಬೇಕೆಂದು ನುಡಿದನು. ಕಾಶಿ ಯು ಆ ಗುಹೆಯೊಳಗಿನ ಭಾಂಡಾರ ಗೃಹವನ್ನು ತೋರಿಸಿದಳು. ಅಲ್ಲಿದ್ದ ಮೋರಯಾ ಗೋಸಾವಿಗಳ ಸುವರ್ಣ ಗಣಪತಿಯನ್ನು ನೇತಾ ಜಿಯು ತಕ್ಕೊಂಡನು. ಸಮಸ್ತ ದ್ರವ್ಯದ ಚೀಲಗಳನ್ನು ಮರಾಟರು ಹೊತ್ತರು. ಹೀಗೆ ಅಪಾರ ಸಂಪತ್ತಿಯನ್ನು ಸೆಳಕೊಂಡು, ಸೆರೆಯಾ ಳಾದ ವೆಂಕಾಜಿಯೊಡನೆ ನೇತಾಜಿಯು ಶಿವಾಜಿಮಹಾರಾಜರಿದ್ದಲ್ಲಿಗೆ ಹೋದನು.

---

## ಶಿವಾಜಿಯ ಬಲಗೈ.

ಮೊದಲು ಆತನು ಮೋರಯಾ ಗೋಸಾವಿಗಳಿಗೆ ಪೊಡಮಟ್ಟು, ಅವರ ಸುವರ್ಣ ಗಣಪತಿಯನ್ನು ಅವರಿಗೆ ಅರ್ಪಿಸಿದನು. ಅನಂತರ ಶಿವಾಜಿ ಮಹಾರಾಜರ ಎದುರಿಗೆ ಗುಹೆಯಲ್ಲಿ ಸಿಕ್ಕ ಸಮಸ್ತ ದ್ರವ್ಯ ವನ್ನೂ ಸುರುವಿಸಿ, ಅವರಿಗೆ ಪೊಡಮಟ್ಟು ಎದ್ದು ನಿಂತುಕೊಂಡನು. ಬಳಿಕ ರಾಮಜಿ, ನಾನಾಜಿ ಮೊದಲಾದವರು ಗೋಸಾವಿಗಳನ್ನೂ, ಮಹಾರಾಜರನ್ನೂ ಅಭಿವಂದಿಸಿದರು. ದತ್ತಾಜಿಯೂ, ಕಾಶಿಯೂ ಆ ಉಭಯ ಮಹಾಪುರುಷರಿಗೆ ನಮಸ್ಕರಿಸಿದರು. ನೇತಾಜಿಯ ವೀರ ಮೂರ್ತಿಯನ್ನು ನೋಡಿ, ಮಹಾರಾಜರಿಗೆ ಆಶ್ಚರ್ಯವಾಯಿತು. ಅವರು ಅವನನ್ನು ನೋಡಿ ಕೌತುಕಪಡುತ್ತಿರಲು, ನೇತಾಜಿಯು ನುಡಿದನೇನಂದರೆ:—"ಮಹಾರಾಜ, ತಮ್ಮ ಅನೇಕ ಜನ ಸೇವಕ

ರಂತೆ ನಾನೂ ತಮ್ಮ ಸೇವಕನೇ. ಕೆಲವು ಮಹತ್ವದ ಕೆಲಸಕ್ಕಾಗಿ ನಾನು ಲೋಹಗಡಕ್ಕೆ ತಮ್ಮ ಬಳಿಗೆ ಬರಬೇಕೆಂದು ಹೊರಟಿರಲು, ಮಾರ್ಗದಲ್ಲಿ ನನ್ನ ಸ್ನೇಹಿತನಾದ ರಾಮಜಿಯಿಂದ ದತ್ತಾಜಿಯೂ, ಕಾಶಿಯೂ ವೆಂಕಾಜಿಯ ಸೆರೆಯಲ್ಲಿ ಬಿದ್ದದ್ದು ಗೊತ್ತಾಯಿತು. ಆದ್ದರಿಂದ ರಾಮಜಿಯ ಪ್ರಯತ್ನದಿಂದ ಕೂಡಿದ ಎರಡು ನೂರು ಜನರೊಡನೆ ಇಲ್ಲಿಗೆ ಬಂದು, ವೆಂಕಾಜಿಯನ್ನು ಸೆರೆಹಿಡಿದೆನು; ಹಾಗು ಆತನ ಅಪಾರವಾದ ಸಂಪತ್ತಿಯನ್ನು ಅಪಹರಿಸಿ, ಆತನನ್ನೂ ಆತನ ಸಂಪತ್ತಿಯನ್ನೂ ಸನ್ನಿಧಿಗೆ ಸಮರ್ಪಿಸಿದ್ದೇನೆ. ಆಮರಣ ತಮ್ಮ ಸೇವೆಯಲ್ಲಿಯೇ ದೇಹ ಸವಿಸಬೇಕೆಂಬ ದೃಢನಿಶ್ಚಯದಿಂದ ನಾನು ತಮ್ಮ ಬಳಿಗೆ ಬಂದಿರುತ್ತೇನೆ."

ಈ ಮೇರೆಗೆ ನುಡಿದು, ನೇತಾಜಿಯು ಮಹಾರಾಜರಿಗೆ ಪುನಃ ಸಾಷ್ಟಾಂಗ ನಮಸ್ಕಾರ ಮಾಡಿದನು. ಬಳಿಕ ರಾಮಜಿಯು ನೇತಾಜಿಯ ಸಮಗ್ರ ಸಂಗತಿಯನ್ನೂ ಮಹಾರಾಜರಿಗೆ ನಿವೇದಿಸಿದನು. ರಾಜಮಾಚಿಯ ಕಿಲ್ಲೆಯಲ್ಲಿ ತೋರಿಸಿದ ಪೌರುಷವೂ; ರಾಮಜಿ, ನಾನಾಜಿ ಇವರ ಮನಸ್ಸನ್ನು ತಿರುಗಿಸಿ, ಅವರನ್ನು ಸ್ವದೇಶ ಸೇವೆಗೆ ಹಚ್ಚಿದ ಸಂಗತಿಯೂ ಗೊತ್ತಾಗಲು, ಶಿವಾಜಿ ಮಹಾರಾಜರು ನೇತಾಜಿಯ ವಿಷಯವಾಗಿ ಅತ್ಯಂತ ಆದರವನ್ನು ತಾಳಿದರು; ಹಾಗು ಎದ್ದು ನಿಂತು ನೇತಾಜಿಯ ಕೈ ಹಿಡಿದು, ಪರಮಪ್ರೀತಿಯಿಂದ ಹತ್ತರ ಕೂಡ್ರಿಸಿಕೊಂಡು, ಅತ್ಯಂತ ಪ್ರೇಮದಿಂದ ಅವನನ್ನು ಗೌರವಿಸಿದರು. ಬಳಿಕ ಮೋರಯಾ ಗೋಸಾವಿಗಳು ನೇತಾಜಿಯನ್ನು ಆಶೀರ್ವದಿಸಿ:- "ವೀರಶ್ರೇಷ್ಠನೇ, ನೀನು ನನ್ನ ಪೂಜೆಯ ಗಣಪತಿಯನ್ನು ತಂದು ಕೊಟ್ಟೆಯಾದ್ದರಿಂದ, ನಿನ್ನ ವಿಷಯವಾಗಿ ನಾನು ಬಹಳ ಸಂತೋಷವುಳ್ಳವನಾಗಿದ್ದೇನೆ. ನನ್ನ ಆಶೀರ್ವಾದದಿಂದ ನಿನಗೆ ಸರ್ವತ್ರ ಜಯಜಯಕಾರವಾಗುವದು! ನೀನು ಶಿವಬಾನ ಬಲಗೈ ಎಂದು ಅನ್ನಿಸಿಕೊಳ್ಳುವಿ. ನೇತಾಜೀ, ಇನ್ನೊಂದು ಆಶೀರ್ವಾದವನ್ನು ನಿನಗೆ ಮಾಡಲೇನು? ಈ ಕಾಶಿಯು ನಿನಗೆ ಅರ್ಧಾಂಗಿನಿಯಾಗುವಳು." ಮೋ-

ರಯಾ ಗೋಸಾವಿಯವರ ಈ ಮಾತಿಗೆ ಎಲ್ಲರೂ ನಕ್ಕರು. ಕಾಶಿಯಂತೂ ನಾಚಿಕೊಂಡು ಮರೆಗೆ ಹೋಗಿ ನಿಂತಳು.

ಬಳಿಕ ಶಿವಾಜಿ ಮಹಾರಾಜರು ನೇತಾಜಿಯನ್ನು ಕುರಿತು ನುಡಿದರೇನಂದರೆ:-"ನೇತಾಜಿ, ಗೋಸಾವಿಗಳವರ ಆಶೀರ್ವಾದದಂತೆ ನೀನು ನಮ್ಮ ಬಲಗೈಯೆನಿಸಿಕೊಳ್ಳಲಿಕ್ಕೆ ಯೋಗ್ಯನಿರುತ್ತೀ. ಇಂದಿನ ವರೆಗೆ ಹಲವರು ಸ್ವರಾಜ್ಯ ಸ್ಥಾಪನೆಗಾಗಿ ನನಗೆ ಸಹಾಯ ಮಾಡಿರುತ್ತಾರೆ ಆವರೆಲ್ಲರಿಗಿಂತಲೂ ನೀನು ಈ ದಿನ ಮಾಡಿದ ಸಹಾಯವು ಬಹು ದೊಡ್ಡದಾಗಿರುತ್ತದೆ. ಈ ದಿನ ನೀನು ದೊರಕಿಸಿ ಕೊಟ್ಟ ಸಂಪತ್ತಿನಿಂದ ಸ್ವರಾಜ್ಯದ ಸಸಿಯು ಭರದಿಂದ ಬೆಳೆಯಲಿಕ್ಕೆ ಮಾರ್ಗವಾಯಿತು. ಕೋಟೆ-ಕೊತ್ತಳಗಳನ್ನು ಕಟ್ಟಿಸುವ ಕೆಲಸವು ನಿಂತು ಹೋಗಿತ್ತು. ಪೋರ್ತುಗೀಜರಿಂದ ತೋಫು-ಬಂದೂಕುಗಳನ್ನು ಕೊಂಡುಕೊಳ್ಳುವದಕ್ಕೆ ದುಡ್ಡು ಇದ್ದಿಲ್ಲ. ಇವೆಲ್ಲ ಕೆಲಸಗಳಿಗೆ ನೀನು ಪುನಃ ಹೊಸ ಜೀವನವನ್ನುಂಟು ಮಾಡಿದೆ. ಇದಕ್ಕಾಗಿ ನಾನೊಬ್ಬನೇ ಏಕೆ, ಇಡಿ ಮಹಾರಾಷ್ಟ್ರವೇ ನಿನ್ನ ಉಪಕಾರ ಸ್ಮರಿಸುವದು!"

ಈ ಮೇರೆಗೆ ಮಹಾರಾಜರು ನೇತಾಜಿಯನ್ನು ಗೌರವಿಸಿ, ವೆಂಕಾಜಿಯ ಕಡೆಗೆ ತಿರುಗಿದರು. ಬಲವಾದ ಹಗ್ಗಗಳಿಂದ ಬಿಗಿಯಲ್ಪಟ್ಟ ವೆಂಕಾಜಿಯು ಸಂತಾಪದಿಂದ ಉರಿಯುತ್ತ ನಿಂತುಕೊಂಡಿದ್ದನು. ಅವನನ್ನು ಕುರಿತು ಶಿವಾಜಿಯು:—ವೆಂಕಾಜೀ, ನೀನು ಶೂರನಿರುತ್ತೀ; ಯುದ್ಧಕಲೆಯಲ್ಲಿ ನಿಪುಣನಿರುತ್ತೀ; ಹೀಗಿದ್ದು ಈ ಬಗೆಯ ದುಷ್ಟ-ಕರ್ಮಗಳನ್ನು ಮಾಡುತ್ತ ಕಾಲಹರಣ ಮಾಡುವದು ಸರಿಯಾದದ್ದಲ್ಲ. ನಿನ್ನ ಎಲ್ಲ ಜನರೂ ನನ್ನನ್ನು ಕೂಡಿಕೊಳ್ಳಲಿಕ್ಕೆ ಒಪ್ಪಿಕೊಂಡಿರುತ್ತಾರೆ. ನಾನು ಅವರ ಅಪರಾಧಗಳನ್ನು ಕ್ಷಮಿಸಿರುತ್ತೇನೆ. ಅದರಂತೆ ನೀನಾದರೂ ನನ್ನ ದಂಡಿನಲ್ಲಿ ಸೇರಿ, ಸ್ವದೇಶ ಸೇವೆಯನ್ನು ಮಾಡಲಿಚ್ಛಿಸುತ್ತಿದ್ದರೆ, ಹೇಳು. ನಿನ್ನ ಎಲ್ಲ ಅಪರಾಧಗಳನ್ನು ಕ್ಷಮಿಸುವೆನು, ಎಂದು ನುಡಿದನು.

ಶಿವಾಜಿಮಹಾರಾಜರ ಈ ಬಗೆಯ ಮಾತುಗಳನ್ನು ಕೇಳಿ ವೆಂಕಾ

ಜಿಯು ಮತ್ತಿಷ್ಟು ಸಂತಪ್ತನಾಗಿ ನುಡಿದನೇನಂದರೆ:—ಶಿವಾಜೀ, ಕ್ಷಮೆಬೇಡುವವೆಂಬದು ಎಂತಹವೋ ನಾನರಿಯೆನು. ಈ ಗೋಸಾವಿಯು ಭಜನ ಹಚ್ಚಿ ಮೋಸ ಮಾಡಿದ್ದರಿಂದ, ನಾನು ಈ ಸ್ಥಿತಿಯಲ್ಲಿ ನಿನ್ನ ಕೈಗೆ ಸಿಗಬೇಕಾಯಿತು. ಆಗಲಿ. ಅದದ್ದಕ್ಕೆ ನಾನು ವಿಷಾದ ಪಡುವದಿಲ್ಲ. ನಿನ್ನಲ್ಲಿ ನಿಜವಾದ ದೊಡ್ಡಿಸ್ತಿಕೆಯಿದ್ದರೆ, ಈ ನಿನ್ನ ಪ್ರೀತಿಯ ನೇತಾಜಿಯನ್ನು ನನ್ನೊಡನೆ ಯುದ್ಧಕ್ಕೆ ಕಳುಹಿಸು. ಯಾವನು ಮೋಸದಿಂದ ನನ್ನ ಸರ್ವಸ್ವವನ್ನೂ ಹರಣ ಮಾಡಿದನೋ, ಅವನ ಗಂಟಲು ಸೀಳಿದರೆ, ಈ ವೆಂಕಾಜಿಗೆ ನೂರು ವರ್ಷ ಬದುಕಿದಷ್ಟು ಸಮಾಧಾನವಾಗುವದು.'' ಶಿವಾಜಿಮಹಾರಾಜರು ನೇತಾಜಿಗೆ ವೆಂಕಾಜಿಯೊಡನೆ ಯುದ್ಧ ಮಾಡಲಿಕ್ಕೆ ಅಪ್ಪಣೆ ಮಾಡಿದರು. ಆಗ ನೇತಾಜಿಯು ಎದ್ದು ನಿಂತು:—ಮಹಾರಾಜ, ಈಗೆರಡು ದಿನಗಳ ಹಿಂದೆ ಕಾಶಿಯು ಈ ವೆಂಕಾಜಿಯ ಕೈಗೆ ಬಾಕಿನಿಂದ ಹೊಡೆದದ್ದರಿಂದ, ಇವನ ಕೈಯು ನೋವಾಗಿದೆ. ಆ ನೋವು ಕಡಿಮೆಯಾದ ಬಳಿಕ ಇವನೊಡನೆ ಕಾಳಗ ನಡೆಸುವದು ನನಗೆ ಯೋಗ್ಯವಾಗಿ ಕಾಣುತ್ತದೆ, ಎಂದನು. ನೇತಾಜಿಯು ಈ ಮಾತುಗಳು ಮುಗಿಯುವಷ್ಟರಲ್ಲೇ ವೆಂಕಾಜಿಯು ನಡುವೇ ಬಾಯಿ ಹಾಕಿ:—''ರಣಹೇಡಿಯೇ, ನನ್ನ ಕೈನೋವಿನ ನೆವವನ್ನು ಮುಂದೆ ಮಾಡಿ, ನಿನ್ನ ಮರಣವನ್ನು ಇನ್ನೂ ನಾಲ್ಕೆಂಟು ದಿನ ಮುಂದೆ ನೂಕಬೇಕೆನ್ನುತ್ತೀಯಾ? ನಿನ್ನಲ್ಲಿ ಪೌರುಷವಿದ್ದರೆ ತಕ್ಕೋ, ಈಗಲೆ ಖಡ್ಗವನ್ನು!'' ಎಂದು ಅರ್ಭಟಿಸಿದನು. ಬಳಿಕ ಕೇಳುವದೇನು? ನೇತಾಜಿಯೂ ಕ್ರುದ್ಧನಾದನು. ವೀರರಿಗುಚಿತವಾದ ಆವೇಶವು ಅವನಲ್ಲಿ ಸಂಚರಿಸಿತು. ಶಿವಾಜಿ ಮಹಾರಾಜರ ಮುಂದೆ ತನ್ನ ಯುದ್ಧನೈಪುಣ್ಯವನ್ನು ತೋರಿಸುವ ಸುಸಮಯವುಂಟಾದ್ದರಿಂದ ಆತನಿಗೆ ತುಂಬಾ ಸಂತೋಷವಾಯಿತು. ಅವನು ಖಡ್ಗ-ಢಾಲುಗಳನ್ನು ತಕ್ಕೊಂಡು ಕಣದಲ್ಲಿ ನಿಂತನು. ವೆಂಕಾಜಿಯನ್ನು ಕಟ್ಟಿದ ಹಗ್ಗಗಳನ್ನು ಬಿಚ್ಚಿ, ಅವನಿಗೆ ಬೇಕಾದ ಖಡ್ಗ-ಢಾಲುಗಳನ್ನು ಕೊಟ್ಟರು. ಆ ಉಭಯ ವೀರರ ಕಾಳಗವನ್ನು ನೋ

ಡುವದಕ್ಕೆ ಜನರು ಇಂಬು ಬಿಟ್ಟು, ಸುತ್ತುವರಿದು ಕುಳಿತುಕೊಂಡರು; ಮತ್ತು ನಂದಹತ್ತಿದ್ದ ಹಿಲಾಲುಗಳಿಗೆ ಮತ್ತೆ ಎಣ್ಣೆ ಹಾಕಿಸಿ, ಪ್ರಶಸ್ತ ವಾದ ಬೆಳಕನ್ನುಂಟು ಮಾಡಿದರು.

ವೆಂಕಾಜಿಯಾದರೂ ನಾಮಾಂಕಿತ ಶೂರನು. ಯುದ್ಧದೊಳ ಗಿನ ಪೇಚುಗಳನ್ನು ಬಲ್ಲವನು. ಉಭಯ ವೀರರೂ ರಾಮ-ರಾಮ ಮಾಡಿ ಕಾಳಗಕ್ಕೆ ಪ್ರಾರಂಭಿಸಿದರು. ಸಮಸ್ತರೂ ಕೌತುಕದಿಂದ ನೋಡುತ್ತ ಕುಳಿತರು; ಆದರೆ ಕಾಶಿಯೋರ್ವಳು ಮಾತ್ರ "ನೇತಾಜಿಗೆ ಜಯ ದೊರೆತರೆ ನನ್ನ ಅದೃಷ್ಟವು ಉತ್ತಮವಾಗುವದು. ವಿಪರೀತ ಪ್ರಸಂಗವೊದಗಿದರೆ ಲಗ್ನವಾಗುವದಕ್ಕಿಂತ ಮೊದಲೇ ನನ್ನ ಪಾಲಿ ಗೆ...." ಎಂದು ಚಿಂತಿಸುತ್ತಿದ್ದಳು. ನೇತಾಜಿಯ ಪ್ರಾಣವನ್ನು ಯಾವಾಗ ಹರಣಮಾಡೇನೆಂಬ ಆತುರತೆಯು ವೆಂಕಾಜಿಯಲ್ಲುಂಟಾದ್ದ ರಿಂದ, ಅವನು ಒಳ್ಳೇ ಯುಕ್ತಿಯಿಂದ ಖಡ್ಗ ಪ್ರಯೋಗಮಾಡಲಾ ರಂಭಿಸಿದನು. ನೇತಾಜಿಯು ಅವನ ಯುಕ್ತಿಗಳ ಆಳವನ್ನು ಕೂಡಲೆ ತಿಳಿದುಬಿಟ್ಟನು. ಬಳಿಕ ಅವನು ನಿರ್ಭಯದಿಂದ ಕಾಳಗವನ್ನಾರಂಭಿ ಸಿದನು. ಉಭಯ ವೀರರು ಖಡ್ಗವನ್ನು ಹೊರಳಿಸುವ, ಢಾಲುಗಳನ್ನು ಮುಂದೆ ಚಾಚುವ, ಒಬ್ಬನ ಪೆಟ್ಟಿಗೆ ಇನ್ನೊಬ್ಬನು ಸಿಕ್ಕ-ಸಿಕ್ಕನೆನ್ನು ವಷ್ಟರಲ್ಲಿ ತಪ್ಪಿಸಿಕೊಂಡು ಪಾರಾಗುವ ಕೌಶಲ್ಯವನ್ನು ನೋಡಿ ಜನ ರಷ್ಟೇ ಏಕೆ, ಶಿವಾಜಿಮಹಾರಾಜರೂ ಬೆರಗಾದರು! ನೇತಾಜಿಯು ಲೀಲೆಯಿಂದ ವೆಂಕಾಜಿಯ ಖಡ್ಗದ ಪೆಟ್ಟುಗಳನ್ನು ತನ್ನ ಢಾಲಿನ ಮೇಲೆ ತಕ್ಕೊಳ್ಳುತ್ತ, ಕೈಸಾಧಿಸಿದಾಗೊಮ್ಮೆ ವೆಂಕಾಜಿಯ ಮೈಗೆ ಪೆಟ್ಟು ಹಾಕುತ್ತಿದ್ದನು. ಅವರಿಬ್ಬರೂ ಗರಗರನೆ ತಿರುಗುತ್ತ ಆ ಕಣ ವನ್ನೆಲ್ಲ ಹುಡಿಗೊಳಿಸಿಬಿಟ್ಟರು. ಸುಮಾರು ಒಂದು ತಾಸಿನ ವರೆಗೆ ಆ ಯುದ್ಧವು ನಡೆಯಿತು. ವೆಂಕಾಜಿಯ ಮೈಗೆ ಮೂರು-ನಾಲ್ಕು ಕಡೆಗೆ ಗಾಯಗಳಾಗಿದ್ದವು. ಒಮ್ಮೆ ಮಾತ್ರ ವೆಂಕಾಜಿಯ ಖಡ್ಗವು ನೇತಾಜಿಗೆ ಸ್ವಲ್ಪ ಮಟ್ಟಿಗೆ ತಗಲಿತ್ತು. ವೆಂಕಾಜಿಯು ತ್ವೇಷದಿಂದ ಪ್ರತಿಯೊಂದು ಸಾರೆ ಹೆಚ್ಚು ಶಕ್ತಿಯನ್ನು ವೆಚ್ಚ ಮಾಡಿ ಖಡ್ಗಪ್ರಯೋಗಮಾಡು

ತ್ತಿದ್ದದರಿಂದ, ಅವನ ಶಕ್ತಿಯು ಕುಂದುತ್ತ ನಡೆಯಿತು. ಆಗ ನೇತಾಜಿಯು ವೆಂಕಾಜಿಯ ಸುತ್ತಲೂ ಗರಗರನೆ ತಿರುಗಿ, ತೀರ ಅವನ ಹತ್ತರ ಹೋಗಿ, ಅವನ ಪೆಟ್ಟನ್ನು ತಪ್ಪಿಸಿಕೊಂಡು, ತನ್ನ ಖಡ್ಗವನ್ನು ಅವನ ಮೇಲೆ ಬಲವಾಗಿ ಪ್ರಯೋಗಿಸಿದನು. ಆ ಕಡತವು ವೆಂಕಾಜಿಯ ಕುತ್ತಿಗೆಗೇ ಕುಳಿತದ್ದರಿಂದ, ಕೂಡಲೆ ವೆಂಕಾಜಿಯು ರುಂಡವು ದಿಂಡದಿಂದ ಬೇರೆಯಾಯಿತು! ಆಗ ಶಿವಾಜಿಯ ಜನರು ಒಮ್ಮೆಲೆ 'ಹರ ಹರ ಮಹಾದೇವ' ಎಂದು ಗರ್ಜಿಸಿದರು. ಆಗಿನ ಕಾಲದಲ್ಲಿ ಕಾಶಿಗೂ, ದತ್ತಾಜಿಗೂ ಆದ ಆನಂದವನ್ನು ವರ್ಣಿಸಲಾಸಲ್ಲ! ಶಿವಾಜಿ ಮಹಾರಾಜರು ನೇತಾಜಿಯನ್ನು ಬಿಗಿದಪ್ಪಿಕೊಂಡು, ಅವನನ್ನು ಬಹಳವಾಗಿ ಗೌರವಿಸಿದರು.

* * *

## ದ್ರವ್ಯ ಸಂಚಯ

ಶಿವಾಜಿ ಮಹಾರಾಜರು ವೆಂಕಾಜಿಯ ಗುಹೆಯಿಂದ ತಿರುಗಿ ಲೋಹಗಡಕ್ಕೆ ಬಂದ ಬಳಿಕ, ನೇತಾಜಿಯ ತಂದೆ-ತಾಯಿಗಳನ್ನು ಕರೆಯಿಸಿಕೊಂಡರು. ಬಳಿಕ ಒಳ್ಳೇ ಸಮಾರಂಭದಿಂದ ಕಾಶಿಯೊಡನೆ ನೇತಾಜಿಯ ವಿವಾಹವನ್ನು ಮಾಡಿದರು! ಬಹು ದಿವಸಗಳಿಂದ ಮನಸ್ಸಿನಲ್ಲಿ ಮಾಡಿದ ಮನೋರಥವು ಇಂದಿಗೆ ಸಿದ್ಧಿಗೆ ಮುಟ್ಟಲು, ದತ್ತಾಜಿಗೂ ಬಹಳ ಸಂತೋಷವಾಯಿತು. ಬಳಿಕ ಮಹಾರಾಜರು ನೇತಾಜಿಯೊಡನೆ ರಾಯಗಡಕ್ಕೆ ಬಂದರು. ರಾಜಮಾಚಿಯ ಕಿಲ್ಲೆಯು ಮುಸಲ್ಮಾನರ ಕೈಸೇರಿದ ಸುದ್ದಿಯು ಗುಪ್ತಹೇರರ ಮುಖಾಂತರವಾಗಿ ಅವರಿಗೆ ಈ ಮೊದಲೇ ತಿಳಿದಿತ್ತು; ಅಲ್ಲದೆ ನೇತಾಜಿಯು ಕಿಲ್ಲೆಯ ಸಮಗ್ರ ವೃತ್ತಾಂತವನ್ನು ಹೇಳಿದ್ದರಿಂದ ಶ್ರೀವರ್ಧನ ಕಿಲ್ಲೆಯಲ್ಲಿದ್ದ ಮರಾಟರಿಗೆ ಸಾಕಷ್ಟು ಅನ್ನಸಾಮಗ್ರಿಯಿದ್ದುದರಿಂದ-ಮುಸಲ್ಮಾನರಿಂದ ಅವರಿಗೆ ಯಾವ ಬಾಧೆಯೂ ಇಲ್ಲೆಂದು ತಿಳಿದು, ಶಿವಾಜಿ ಮಹಾರಾಜರು ಆ ಕಿಲ್ಲೆಯ ಮೇಲೆ ಸ್ವಾರೀ ಮಾಡುವದಕ್ಕೆ ಕೆಲವು ದಿವಸ ತಡೆದರು.

ವೆಂಕಾಜಿಯು ಗುಹೆಯಲ್ಲಿ ಸಿಕ್ಕ ದ್ರವ್ಯದಿಂದ ಸದ್ಯಕ್ಕೆ ದುಡ್ಡಿನ ಕೊರತೆಯು ತಪ್ಪಿದಂತಾಗಿದ್ದರೂ ಎರಡು-ಮೂರು ತಿಂಗಳುಗಳಲ್ಲಿಯೇ ಆ ತೊಂದರೆಯು ಪುನಃ ತನ್ನ ಉಗ್ರಸ್ವರೂಪವನ್ನು ತೋರಿಸುವದೆಂಬದು ಆ ದ್ರವ್ಯದ ಲೆಖ್ಖದಿಂದ ಗೊತ್ತಾಯಿತು. ಆಗ ಗೋಸಾವಿಗಳು ಶಿವರಾಯನನ್ನು ರಾಯಗಡದ ಕಿಲ್ಲೆಯಲ್ಲಿ ಒಂದು ಸ್ಥಳಕ್ಕೆ ಕರೆದುಕೊಂಡು ಹೋಗಿ, ಅಲ್ಲಿಯ ನೆಲವನ್ನಗಿಸಲಿಕ್ಕೆ ಹೇಳಿದರು. ಕೂಡಲೆ ಕೂಲಿಕಾರರು ಅಲ್ಲಿ ನಡುಮಟ ಆಳವಾದ ಒಂದು ಗುಂಡಿಯನ್ನು ತೋಡಿದರು. ಅಷ್ಟರಲ್ಲಿ ಆ ಗುಂಡಿಯಲ್ಲಿ ಒಂದು ತಾಮ್ರದ ಕೊಳವೆಯು ಸಿಕ್ಕಿತು. ಆ ಕೊಳವೆಯ ಎರಡೂ ಬಾಯಿಗಳು ಬೆಸಿಗೆಯಿಂದ ಭದ್ರವಾಗಿ ಮುಚ್ಚಲ್ಪಟ್ಟಿದ್ದವು. ಗೋಸಾವಿಗಳು ಆ ಕೊಳವೆಯನ್ನು ತಕ್ಕೊಂಡು ಶಿವಾಜಿಯೊಡನೆ ಅರಮನೆಗೆ ಬಂದರು. ಬಳಿಕ ಏಕಾಂತದಲ್ಲಿ ಕುಳಿತು, ಆ ಕೊಳವೆಯನ್ನು ಒಡೆದರು. ಅದರಲ್ಲಿ ಒಂದು ಪತ್ರವು ಹೊರಟಿತು. ಪತ್ರವು ದೇವನಾಗರಲಿಪಿಯಿಂದ ಗೀರ್ವಾಣಭಾಷೆಯಲ್ಲಿ ಸುಂದರವಾಗಿ ಬರೆಯಲ್ಪಟ್ಟಿತ್ತು. ಗೋಸಾವಿಗಳು ಪತ್ರವನ್ನು ಓದಿ ತೋರಿಸಿದರು. ಆ ಪತ್ರದ ಸಂಗತಿಯಿಂದ ಶಿವಾಜಿ ಮಹಾರಾಜರ ಮೋರೆಯು ಹಿಗ್ಗಿ ಇಷ್ಟಗಲವಾಯಿತು! ಆಗ ಗೋಸಾವಿಗಳು ನುಡಿದರೇನಂದರೆ:- "ಶಿವಬಾ, ನಿನ್ನ ಮೇಲೆ ಶ್ರೀ ಅಂಬಾಭವಾನಿಯ ಕೃಪೆಯಿರುವದು. ಆದ್ದರಿಂದ ಈ ಪತ್ರದಲ್ಲಿದ್ದ ಸಂಗತಿಯಂತೆ ಈಗಲೆ ಆ ನೆಲವನ್ನು ಅಗಿಸುವದಕ್ಕಿಂತ, ಶ್ರೀ ದೇವಿಯು ಸ್ವಪ್ನದಲ್ಲಿ ಈ ಸಂಗತಿಯನ್ನು ಹೇಳಿದಳೆಂದು ವಿಶ್ವಾಸಿಗರ ಕಡೆಯಿಂದ ದರ್ಬಾರದಲ್ಲಿ ಹೇಳಿಸಿದರೆ, ಮಹಾರಾಷ್ಟ್ರದಲ್ಲೆಲ್ಲ ಈ ಸಂಗತಿಯು ಹರಡುವದು. ಅದರಿಂದ ಜನರು ಕುಶಂಕೆಗಳನ್ನು ತಕ್ಕೊಳ್ಳದೆ, ನಿನ್ನನ್ನು ಕೂಡಿಕೊಳ್ಳುವರು; ನಿನ್ನ ಮೇಲೆ ದೇವಿಯ ಕೃಪೆಯಿರುವದೆಂಬದು ಜನರ ಪ್ರತ್ಯಯಕ್ಕೂ ಬರುವದು." ಎಂದು ನುಡಿದರು. ಶಿವಾಜಿಯು ಗೋಸಾವಿಗಳ ಮಾತನ್ನು ಒಪ್ಪಿಕೊಂಡನು. ಪತ್ರದ ಸಂಗತಿಯನ್ನು ಸ್ವಪ್ನದ ಸಂಗತಿಯೆಂದು ಪ್ರಸಿದ್ಧ ಮಾಡುವದಕ್ಕೆ ನೇತಾಜಿಗೆ ಅವರು ಹೇಳಿದರು.

ಮರುದಿನ ಮುಂಜಾನೆ ದರ್ಬಾರವನ್ನು ನೆರೆಯಿಸಿದರು. ಕೂಲಿ ಕಾರರು ಮೊದಲು ಮಾಡಿಕೊಂಡು ಸಮಸ್ತ ಜನರೂ ದರ್ಬಾರಿಗೆ ಬಂದರು. ಶಿವಾಜಿ ಮಹಾರಾಜರೂ, ಮೋರೆಯೂ ಗೋಸಾವಿಗಳೂ ಬಂದು ಉಚಿತ ಪೀಠಗಳನ್ನಲಂಕರಿಸಿದರು. ದರ್ಬಾರದ ಬಲಭಾಗ ದಲ್ಲಿ ಜಿಜಾಬಾಯಿಯು ತನಗುಚಿತವಾದ ಸ್ಥಾನದಲ್ಲಿ ಕುಳಿತುಕೊಂಡಿ ದ್ದಳು. ಅಷ್ಟರಲ್ಲಿ ನೇತಾಜಿಯು ಎದ್ದು ನಿಂತು ಮಹಾರಾಜರಿಗೂ ಗೋಸಾವಿಗಳಿಗೂ ಜಿಜಾಬಾಯಿಗೂ ನಮಸ್ಕರಿಸಿ, ನುಡಿದನೇನಂದರೆ: “ಮಹಾರಾಜರೇ, ನಾನು ನಿನ್ನೆಯ ದಿವಸ ರಾತ್ರಿ ಮಲಗಿಕೊಂಡಾಗ ಬೆಳಗು ಮುಂಜಾವಿನಲ್ಲಿ ನನಗೊಂದು ಸ್ವಪ್ನ ಬಿದ್ದಿತು. ಸ್ವಪ್ನದಲ್ಲಿ ಶ್ರೀ ಅಂಬಾಭವಾನಿಯು ಶಾಂತ ತೇಜಸ್ಸಿನಿಂದ ನನಗೆ ದರ್ಶನವನ್ನು ಕೊಟ್ಟಳು. ಆಕೆಯು ನನ್ನನ್ನು ಕುರಿತು, ‘ನನ್ನ ಹಿಂದಿನಿಂದ ಬಾ’ ಎಂದು ನುಡಿದು, ಮುಂದಕ್ಕೆ ಸಾಗಿದಳು. ಶ್ರೀ ದೇವಿಯ ಅಷ್ಟ ಭುಜಾಂಕಿತ ದಿವ್ಯಮೂರ್ತಿಯನ್ನು ನೋಡಿ ನಾನು ಸಂತೋಷದಿಂದ ಆಕೆಯ ಆಜ್ಞೆಯಂತೆ ನಡೆದೆನು ಆಕೆಯು ಈ ರಾಯಗಡ ಕೋಟೆಯ ಈಶಾನ್ಯಭಾಗದಲ್ಲಿರುವ ವೃಂದಾವನದ ಬಳಿಗೆ ಹೋದಳು; ಮತ್ತು ವೃಂದಾವನದ ಕಟ್ಟೆಯನ್ನು ದೂರ ಸರಿಸೆಂದು ನನಗೆ ಆಜ್ಞಾಪಿಸಿದಳು. ಇಂಥ ದೊಡ್ಡ ಕಟ್ಟೆಯು ನನ್ನೊಬ್ಬನಿಂದಲೇ ಹೇಗೆ ಸರಿಯುವದೆಂದು ನಾನು ಶಂಕಿಸಿ, ದೇವಿಯ ಆಜ್ಞೆಯೆಂದು ತಿಳಿದು, ಕೈಯಿಂದ ದೂಡಿ ದೆನು ನಾನು ಕೈ ಮುಟ್ಟುವದೊಂದೇ ತಡ; ಕಟ್ಟೆಯು ದೂರ ಸರಿದು ಹೋಯಿತು! ಕಟ್ಟೆಯ ಬುಡಕ್ಕೆ ಒಂದು ಗುಹೆಯು ಕಾಣಿಸಿತು. ಗುಹೆಗೆ ಪಾವಟಿಗೆಗಳಿದ್ದವು. ಶ್ರೀ ದೇವಿಯು ಗುಹೆಯಲ್ಲಿಳಿದಳು. ಆಕೆಯ ಪ್ರಶಾಂತ ತೇಜಸ್ಸಿನಿಂದ ಗುಹೆಯೊಳಗಿನ ಅಂಧಕಾರವು ಅಡಗಿತು. ಆ ಬೆಳಕಿನಲ್ಲಿ ನಾನೂ ಗುಹೆಯೊಳಕ್ಕೆ ಇಳಿದೆನು. ಅಹಹ! ಆ ಗುಹೆಯ ವರ್ಣನೆಯನ್ನು ಎಷ್ಟೆಂದು ಮಾಡಲಿ? ಅಲ್ಲಿ ಮುತ್ತು, ಮಾಣಿಕ, ವಜ್ರ, ವೈಢೂರ್ಯಗಳು ರಾಶಿಗೆ ರಾಶಿಯಾಗಿ ಬಿದ್ದಿರುವವು. ಸುವರ್ಣದ ನಾಣ್ಯಗಳಿಗಂತೂ ಲೆಕ್ಕವೇ ಇಲ್ಲ. ಅಲ್ಲಿ ನೂರಾರು ಸರ್ಪಗಳಿದ್ದವು.

ಅವು ನನ್ನ ಮೇಲೆ ಧಾವಿಸಿ ಬಂದವು. ಆಗ ಶ್ರೀ ದೇವಿಯು ಆ ಸರ್ಪಗಳನ್ನು ಕುರಿತು:-"ಇನ್ನು ನೀವು ಈ ಸ್ಥಳವನ್ನು ಬಿಟ್ಟು ಬೇರೆ ಕಡೆಗೆ ಹೋಗಬೇಕು. ಈ ಎಲ್ಲ ನಿಧಿಯನ್ನು ನಾನು ನನ್ನ ಭಕ್ತನಾದ ಶಿವಾಜಿಗೆ ಕೊಟ್ಟುಬಿಟ್ಟಿದ್ದೇನೆ." ಎಂದು ನುಡಿದಳು. ಸರ್ಪಗಳು ಅಲ್ಲಿಂದ ಹೊರಟು ಹೋದವು ಅಷ್ಟರಲ್ಲಿ ಬೆಳಗಿನ ವಾದ್ಯಗಳ ಸಪ್ಪಳವಾಗಲು, ನನಗೆ ಎಚ್ಚರವಾಯಿತು. ಎದ್ದು ನೋಡುವಷ್ಟರಲ್ಲಿ ದೇವಿಯೂ ಇಲ್ಲ; ಗುಹೆಯೂ ಇಲ್ಲ!"

ಈ ಮೇರೆಗೆ ನೇತಾಜಿಯು ಹೇಳಿದ ಸ್ವಪ್ನದ ಸಂಗತಿಯಿಂದ ಸಭಿಕರೆಲ್ಲರಿಗೂ ತುಂಬಾ ಆಶ್ಚರ್ಯವಾಯಿತು. ಶಿವಾಜಿ ಮಹಾರಾಜರೂ ಆಶ್ಚರ್ಯವನ್ನು ವ್ಯಕ್ತಪಡಿಸಿದರು. ಆಗ ಮೋರಯಾ ಗೋಸಾವಿಗಳು:—'ಶಿವಬಾ, ನೇತಾಜಿಯ ಈ ಸ್ವಪ್ನದ ಪ್ರತೀತಿಯನ್ನು ನೋಡಿಯೇ ಬಿಡೋಣ. ನಿನ್ನ ಮೇಲೆ ಶ್ರೀ ದೇವಿಯ ಕೃಪೆಯಿದ್ದರೆ, ಆತನ ಈ ಸ್ವಪ್ನವು ನಿಜವಾದರೂ ಆಗಬಹುದು" ಎಂದು ನುಡಿದರು. ಕೂಡಲೆ ಶಿವಾಜಿ ಮಹಾರಾಜರು ನೂರಾರು ಜನ ಕೂಲಿಕಾರರನ್ನು ಕರೆದುಕೊಂಡು ದರ್ಬಾರದ ಎಲ್ಲ ಜನರೊಡನೆ ರಾಯಗಡದ ಈಶಾನ್ಯ ಮೂಲೆಯಲ್ಲಿದ್ದ ವೃಂದಾವನಕ್ಕೆ ಹೋದರು. ಕೂಲಿಯವರು ವೃಂದಾವನದ ಕಟ್ಟೆಯನ್ನು ಕಿತ್ತು ಒಗೆದರು. ಆಗ ನೇತಾಜಿಯ ಸ್ವಪ್ನದಂತೆ ಅಲ್ಲಿ ಒಂದು ಗುಹೆಯು ಹೊರಟಿತು. ಹಿಲಾಲು ಹಚ್ಚಿಸಿ, ಶಿವಾಜಿ ಮಹಾರಾಜರು ಗುಹೆಯನ್ನು ಪ್ರವೇಶಿಸಿದರು. ನೇತಾಜಿಯು ಹೇಳಿದಂತೆ ಅವರಿಗೆ ಅಲ್ಲಿ ಅಗಣಿತ ದ್ರವ್ಯವೂ, ಮುತ್ತು-ರತ್ನಗಳೂ ಸಿಕ್ಕವು! ಜನರು ಶ್ರೀ ಮಹಾರಾಜರ ಹಾಗು ಶ್ರೀ ದೇವಿಯ ಜಯಜಯಕಾರವನ್ನು ಮಾಡಿದರು! ನೇತಾಜಿಯು ಸ್ವಪ್ನದಲ್ಲಿ ಬಂದು, ಶ್ರೀ ದೇವಿಯು ಇಂಥ ಅದ್ಭುತ ಚಮತ್ಕಾರವನ್ನು ತೋರಿಸಿದಳೆಂದು ನೇತಾಜಿಯ ಮೇಲೂ ಜನರ ಪ್ರೇಮವು ಹೆಚ್ಚಿತು.

ಇದೇ ಸಂಧಿಯಲ್ಲಿ ಶಿವಾಜಿ ಮಹಾರಾಜರ ಸೈನಿಕರು ವಿಜಾಪುರಕ್ಕೆ ಹೋಗುವ ಬಾದಶಾಹೀ ಹಣವನ್ನು ಹರಣಮಾಡಿ ತಂದದ್ದ

ರಿಂದ, ರಾಯಗಡವು ಸಂಪತ್ತಿನ ತವರುಮನೆಯಾಯಿತು. ದ್ರವ್ಯದ ಕೊರತೆಯು ಹಿಂಗಿ, ಸುವರ್ಣವೃಷ್ಟಿಯಾದಂತೆ ಧನವು ಸಿಗಲು, ಮಹಾರಾಜರು ಫಿರಂಗೀ ಜನರಿಂದ ಬಹು ದೂರಿನ ಗುರಿಯನ್ನು ಕೆಡಹುವ ಹಾಗು ದೊಡ್ಡ ದೊಡ್ಡ ಹನ್ನೆರಡು ತೋಫುಗಳನ್ನೂ ಅಸಂಖ್ಯ ಖಡ್ಗ-ಢಾಲು-ಬಂದೂಕುಗಳನ್ನೂ ಕೊಂಡುಕೊಂಡರು. ತಮ್ಮ ಸೈನ್ಯದಲ್ಲಿ ಎಷ್ಟು ಜನರು ಬಂದರೂ ಅವರೆಲ್ಲರಿಗೂ ಪೂರೈಸುವಷ್ಟು ಶಸ್ತ್ರಾಸ್ತ್ರಗಳು ಅವರ ಶಸ್ತ್ರಾಗಾರದಲ್ಲಿ ತುಂಬಿದವು. ಹೀಗೆ ದಂಡಾಳುಗಳ ಹಾಗು ಶಸ್ತ್ರಾಸ್ತ್ರಗಳ ಸಂಖ್ಯೆಯು ಹೆಚ್ಚಾಗಲು, ಶಿವಾಜಿಮಹಾರಾಜರು 'ಕಲ್ಯಾಣ'ವೆಂಬ ಒಂದು ಮಹತ್ವದ ದುರ್ಗವನ್ನು ಕೈವಶ ಮಾಡಿಕೊಳ್ಳುವದಕ್ಕೋಸ್ಕರ ನೇತಾಜಿಯನ್ನೂ ಆಬಾಜಿ ಸೋನದೇವನೆಂಬ ಇನ್ನೊಬ್ಬ ಶೂರನನ್ನೂ ನೇಮಿಸಿದರು.

---

## ಕಲ್ಯಾಣದ ಮುತ್ತಿಗೆಯೂ, ಶಿವಾಜಿಯ ಶೀಲಪ್ರಭಾವೂ

ಕಲ್ಯಾಣದುರ್ಗವು ಆ ಕಾಲದಲ್ಲಿ ಅತ್ಯಂತ ಮಹತ್ವದ್ದಾಗಿತ್ತು. ಅದು ವಿಜಾಪುರದ ಬಾದಶಹನ ವಶದಲ್ಲಿದ್ದುದರಿಂದ, ಶಿವಾಜಿಯ ಜನರು ಮೈ ಕೈ ಬಿಚ್ಚಿ ಆಡ್ಡಾಡಲಿಕ್ಕೆ ಬಹಳ ತೊಂದರೆಯಾಗಿತ್ತು. ಅದೊಂದು ದುರ್ಗವು ಕೈಸೇರಿದ್ದರೆ ಶಿವಾಜಿಗೆ ರಾಜ್ಯ ಬೆಳಿಸಲಿಕ್ಕೆ ಬಹು ಅನುಕೂಲವಾಗುತ್ತಿತ್ತು; ಆದರೆ ಆ ದುರ್ಗವು ಅತ್ಯಂತ ಭದ್ರವಿದ್ದು, ಅದರ ಮೇಲೆ 'ಮುಲಾಣಾ ಹಯಾತಿ' ಎಂಬ ಶೂರ ಸುಭೇದಾರನಿದ್ದನು. ಈ ಮುಲಾಣಾ ಹಯಾತಿಯು ನಮ್ಮ ಕಥಾನಕವು ಪ್ರಾರಂಭವಾದ ಕಾಲದಲ್ಲಿಯೇ, ಅಂದರೆ ಗಂಗೂ ಸುಂದರಿಯು ನಿಬ್ಬಣವನ್ನು ಮುಸಲ್ಮಾನ ದಂಡಾಳುಗಳು ಸುಲಿದ ಕಾಲದಲ್ಲಿಯೇ ಕಲ್ಯಾಣದ ಸುಭೇದಾರಿಕೆಯ ಅಧಿಕಾರವನ್ನು ಸಂಪಾದಿಸಿದ್ದನು. ರುಸ್ತುಮ ಅಜಮುಲ್ಲನು ಸೆರೆಸಿಕ್ಕ ಗಂಗೂ ಸುಂದರಿಯನ್ನು ವಿಜಾಪುರಕ್ಕೆ ಕರೆದುಕೊಂಡು

ಹೋಗುತ್ತಿರಲು, ಮಾರ್ಗದಲ್ಲಿ ಮುಲಾಣಾ ಹಯಾತಿಗೂ ಆತನಿಗೂ ಭೆಟ್ಟಿಯಾಯಿತು. ರುಸ್ತುಮ ಅಜಮುಲ್ಲನು ಸುಲಿಗೆಯ ವೃತ್ತಾಂತವನ್ನು ಹೇಳಿ, ಗಂಗೂ ಎಂಬ ಓರ್ವ ಸುಂದರಿಯನ್ನು ಸೆರೆ ಹಿಡಿದುಕೊಂಡು ಬಂದಿರುವೆವೆಂದು ಹೇಳಿದನು; ಆಗ ಸುಭೇದಾರನಾದ ಮುಲಾಣಾ ಹಯಾತಿಯು ರುಸ್ತುಮ ಅಜಮುಲ್ಲನನ್ನು ವಿಜಾಪುರಕ್ಕೆ ಬಿಡದೆ, ಅವನನ್ನು ಅವನ ಪರಿವಾರ ಸಹಿತವಾಗಿ ಕಲ್ಯಾಣಕ್ಕೆ ಕರೆದುಕೊಂಡು ನಡೆದನು ಆದ್ದರಿಂದ ರುಸ್ತುಮನ ಸೆರೆಯಲ್ಲಿದ್ದ ಗಂಗೂ ಸುಂದರಿಯೂ ಕಲ್ಯಾಣಕ್ಕೆ ಹೋಗಬೇಕಾಯಿತು. ಕಲ್ಯಾಣಕ್ಕೆ ಹೋಗುವಾಗ ಅವಳು ತನ್ನ ಚಾಕಗ್ರಾಮದ ಬಳಿಯಲ್ಲಿಯೇ ಹಾದು ಹೋಗಬೇಕಾದ್ದರಿಂದ, ಆಕೆಗೆ ಪರಮಾವಧಿಯಾದ ದುಃಖವಾಯಿತು. ಹೀಗೆ ಅವಳು ಕಲ್ಯಾಣ ದುರ್ಗವನ್ನು ಸೇರಿದಳು. ಆಕೆಯನ್ನು ರುಸ್ತುಮ ಅಜಮುಲ್ಲನು ಬಹಳ ಪ್ರೀತಿಸುತ್ತಿದ್ದನು; ಆದರೆ ಸೆರೆ ಸಿಕ್ಕ ಸುಂದರಿಯರನ್ನು ಮೊದಲು ಬಾವಶಹನಿಗೆ ಒಪ್ಪಿಸಿ, ಬಳಿಕ ಅವನ ಅಪ್ಪಣೆಪಡೆದು, ಯಾವನೊಬ್ಬನು ನಿಕಾ ಮಾಡಿಕೊಳ್ಳಬೇಕಾಗುತ್ತಿತ್ತು. ಹೀಗೆ ಮಾಡಲಿಕ್ಕೆ ಯಾರಾದರೂ ತಪ್ಪಿದರೆ, ಅವರು ತಮ್ಮ ಪ್ರಾಣಕ್ಕೆ ಕೂಡ ಎರವಾಗಬೇಕಾಗುತ್ತಿತು. ಆದ್ದರಿಂದ ರುಸ್ತುಮ ಅಜಮುಲ್ಲನು ಮನಸ್ಸಿನಲ್ಲಿ ಬಹಳವಾಗಿ ಚಡಪಡಿಸುತ್ತ, ಗಂಗೂಸುಂದರಿಯ ವ್ಯವಸ್ಥೆಯನ್ನು ಬಹು ಚನ್ನಾಗಿ ಇರಿಸಿದ್ದನು. ರುಸ್ತುಮ ಅಜಮುಲ್ಲನ ಸ್ಥಳದಲ್ಲಿ ಇನ್ನೊಬ್ಬ ಮುಸಲ್ಮಾನನಿದ್ದರೆ, ಅವನು ಕಾಮಾಂಧನಾಗಿ, ಗುಪ್ತ ರೀತಿಯಿಂದ ಆಕೆಯ ಸತೀತ್ವವನ್ನು ಎಂದೋ ಹರಣ ಮಾಡಿ ಬಿಡುತ್ತಿದ್ದನು; ಆದರೆ ರುಸ್ತುಮ ಅಜಮುಲ್ಲನು ಸ್ವಭಾವತಃ ಸಜ್ಜನನಾಗಿದ್ದನು! ಅದರಿಂದ ಗಂಗೂ ಸುಂದರಿಯು ಮನಸ್ಸಿನಲ್ಲಿ ನೊಂದುಕೊಳ್ಳದಂತೆ ಆಕೆಯ ಪ್ರಸನ್ನತೆಯನ್ನು ಪಡೆದು, ಬಾದಶಹನ ಸಮಕ್ಷವಾಗಿಯೇ ಆಕೆಯನ್ನು ನಿಕಾಮಾಡಿಕೊಳ್ಳಬೇಕೆಂದು ಅವನು ಆಕೆಯ ವಿಷಯವಾಗಿ ಬಹಳ ಪ್ರೇಮದಿಂದ ನಡೆಯಹತ್ತಿದ್ದನು. ಆಕೆಯ ರೂಪಕ್ಕೆ ಅವನು ಹೆಚ್ಚಾಗಿ ಮೋಹಿಸಿದ್ದನು. ಇರಲಿ.

ಸುಭೇದಾರನಾದ ಮುಲಾಣಾ ಹಯಾತಿಯು ಕಲ್ಯಾಣದ ದುರ್ಗದಲ್ಲಿ ಬಹಳ ದಿವಸ ಇದ್ದುದರಿಂದ, ಅವನು ಆ ದುರ್ಗದ ಭದ್ರತೆಯನ್ನು ಚೆನ್ನಾಗಿ ಮಾಡಿಸಿದ್ದನು. ಆದ್ದರಿಂದ ಆ ಕಿಲ್ಲೆಯು ತನಗೆ ಹೇಗೆ ದೊರೆಯುವದೆಂದು ಶಿವಾಜಿಯು ಹಗಲಿರುಳೂ ಯೋಚಿಸುತ್ತಿದ್ದನು ಮುಲಾಣಾ ಹಯಾತಿಯಾದರೂ ಶಿವಾಜಿಯ ಗನೀಮೀಕಾವಾ ಪದ್ಧತಿಯನ್ನು ಬಲ್ಲವನಾದ್ದರಿಂದ ಒಳ್ಳೇ ಎಚ್ಚರದಿಂದಿದ್ದನು.

ಹೀಗೆ ಕಲ್ಯಾಣ ದುರ್ಗದ ಸ್ಥಿತಿಯಿರುವಾಗ, ಹಿಂದೆ ಹೇಳಿದಂತೆ ಆಬಾಜಿ ಸೋನದೇವ ಹಾಗು ನೇತಾಜಿ ಇವರಿಬ್ಬರೂ ಹತ್ತು ಸಾವಿರ ಜನ ಮರಾಟರ ಸೈನ್ಯವನ್ನೂ, ಎರಡು ತೋಫುಗಳನ್ನೂ ತಕ್ಕೊಂಡು ಕಲ್ಯಾಣ ದುರ್ಗದ ಮೇಲೆ ಸಾಗಿ ಹೋದರು. ತಾವು ದುರ್ಗದ ಮೇಲೆ ದಾಳಿಯಿಡುವ ವಾರ್ತೆಯು ದುರ್ಗದೊಳಗಿನವರಿಗೆ ತಿಳಿಯಬಾರದೆಂದು ಆಬಾಜಿ ಸೋನದೇವನೂ, ನೇತಾಜಿಯೂ ಕೂಡಿ ಬಹು ಗುಪ್ತವಾಗಿ ತಮ್ಮ ಸೈನ್ಯವನ್ನು ಸಾಗಿಸಿಕೊಂಡು ಕಲ್ಯಾಣ ದುರ್ಗದ ಬಳಿಗೆ ಹೋದರು. ಕಲ್ಯಾಣಕ್ಕೆ ಆಧಾರಭೂತವಾದ ರಾಜದುರ್ಗವೆಂಬ ಕಿಲ್ಲೆಯಲ್ಲಿ ಮುಲಾಣಾ ಹಯಾತಿಯು ತನ್ನ ತೋಫಖಾನೆಯನ್ನಿಟ್ಟಿದ್ದನು. ಅಬಾಜಿ ಸೋನದೇವನು ಗುಪ್ತ ಹೇರರಿಂದ ದುರ್ಗದೊಳಗಿನ ಎಲ್ಲ ಸಂಗತಿಗಳನ್ನು ತಿಳಿದುಕೊಂಡು, ಕಲ್ಯಾಣ ಹಾಗು ರಾಜದುರ್ಗ ಇವೆರಡನ್ನೂ ಒಮ್ಮೆಲೆ ನಾಶಗೊಳಿಸಲಿಕ್ಕೆ ಬರುವ ಹಾಗೆ ತನ್ನ ತೋಫುಗಳನ್ನು ಗುಡ್ಡದ ಮೇಲೇರಿಸಿದನು; ಮತ್ತು ತೋಫನ್ನು ಹೊಡೆಯಲಿಕ್ಕೆ ಪ್ರಾರಂಭಿಸಿದನು. ಕಲ್ಯಾಣ ಮತ್ತು ರಾಜದುರ್ಗಗಳಲ್ಲಿ ಒಮ್ಮಿಂದೊಮ್ಮೆಲೆ ಅಗ್ನಿಯ ಮಳೆಯು ಸುರಿಯಲಿಕ್ಕೆ ಹತ್ತಿತು. ಕೂಡಲೆ ಜನರು ಗಾಬರಿಯಾಗಿ ದಾರಿ ಸಿಕ್ಕತ್ತ ಓಡತೊಡಗಿದರು. ಆಗ ಸುಭೇದಾರನಾದ ಮುಲಾಣಾ ಹಯಾತಿಯು ವಿದ್ಯಮಾನ ಪ್ರಕಾರವನ್ನು ಅರಿತು, ಶತ್ರುಗಳ ತೋಫಖಾನೆಯಿರುವ ದಿಕ್ಕನ್ನು ತರ್ಕದಿಂದ ತಿಳಿದು, ತಮ್ಮ ತೋಫನ್ನು ಪ್ರಾರಂಭ ಮಾಡಿಸಿದನು. ತಮ್ಮ ತೋಫಖಾನೆಯು ಪ್ರಾರಂಭವಾದ ಕೂಡಲೆ ಮರಾಟರ ತೋಫ

ಖಾನೆಯು ಬಂದಾಗುವದೆಂದು ಸುಭೇದಾರನು ತಿಳಿದಿದ್ದನು; ಆದರೆ ಮರಾಟರ ತೋಫಖಾನೆಯು ಬಂದಾಗುವದರ ಬದಲು, ಅದರ ಹೊಡ ತಕ್ಕೆ ಮುಸಲ್ಮಾನರ ತೋಫಖಾನೆಯೇ ಬಂದಾಯಿತು. ಆ ಕೂಡಲೆ ನೇತಾಜಿಯೂ, ಸೋನದೇವನೂ "ಹರ ಹರ ಮಹಾದೇವ" ಎಂದು ಗರ್ಜಿಸುತ್ತ ಕಿಲ್ಲೆಯ ಮೇಲೆ ಸಾಗಿ ಹೋದರು. ಇವರ ರಭಸವನ್ನು ಮುಸಲ್ಮಾನರಿಂದ ತಡೆಯಲಿಕ್ಕಾಗಲಿಲ್ಲ. ಮರಾಟರು ಕಿಲ್ಲೆಯ ಒಳಹೊಕ್ಕರು. ನೇತಾಜಿಯು ರಾಜದುರ್ಗದ ಮಾರ್ಗವಾಗಿ ಒಳಗೆ ಸೇರಿದನು; ಆಬಾಜಿಯು ಕಲ್ಯಾಣ ಶಹರದಲ್ಲಿ ಹೊಕ್ಕನು. ಮರಾಟರು ತನಗೆ ಬಸುಗೊಳ್ಳುವದಿಲ್ಲೆಂದು ತಿಳಿದು, ಸುಭೇದಾರನು ತನ್ನ ಎಲ್ಲ ಸೈನಿಕರೊಡನೆ ಅಲ್ಲಿಂದ ಕಾಲ್ತೆಗೆದನು. ಮರಾಟರು ಬೆನ್ನು ಹತ್ತಿದ್ದರಿಂದ ಜೀವವೊಂದನ್ನು ಬದುಕಿಸಿಕೊಂಡು ಓಡಿಹೋಗಬೇಕಾದರೆ, ಮುಸಲ್ಮಾನರಿಗೆ ಸಾಕು ಸಾಕಾಯಿತು. ದುರ್ಗವು ಮರಾಟರ ಕೈವಶವಾಯಿತು ಆಬಾಜಿಯೂ-ನೇತಾಜಿಯೂ ಒತ್ತಟ್ಟಿಗೆ ಕೂಡಲು, ಆಗ ಆ ಉಭಯ ವೀರರಿಗೆ ಆದ ಆನಂದವು ಅಂಬರವನ್ನು ತುಂಬಿ ಬಿಟ್ಟಿತು! ಆ ದುರ್ಗದಲ್ಲಿ ಮರಾಟರಿಗೆ ಮುಸಲ್ಮಾನರ ಎಷ್ಟೋ ಸುಂದರ ಒಡವೆಗಳು ಸಿಕ್ಕವು. ಸುಭೇದಾರನ ಸೊಸೆಯೊಬ್ಬಳು ಬಹು ಸುಂದರಿಯಿದ್ದಳು; ಆಕೆಯೂ ಮರಾಟರ ಕೈಗೆ ಸಿಕ್ಕಳು. ಆಬಾಜಿ ಸೋನದೇವನು ಆಕೆಯ ಅಪ್ರತಿಮ ಸೌಂದರ್ಯಕ್ಕೆ ಬೆರಗಾಗಿ, ಅವಳನ್ನು ಶಿವಾಜಿಗೆ ಅರ್ಪಿಸಬೇಕೆಂದು ಮನಸ್ಸು ಮಾಡಿದನು. ಆಬಾಜಿಗೆ ಶಿವಾಜಿ ಮಹಾರಾಜರ ಪಾಪಭೀರುತೆಯು ಗೊತ್ತಿದ್ದರೂ, ಆಕೆಯ ಸೌಂದರ್ಯಾತಿಶಯದಿಂದ ಆತನ ವಿವೇಕವು ಮಸಣಿಸಿ ಹೋಯಿತು. ಆತನು ನೇತಾಜಿಯನ್ನು ದುರ್ಗದ ರಕ್ಷಣೆಗಿರಿಸಿ, ದುರ್ಗದಲ್ಲಿ ದೊರೆತ ಸುಂದರ ಒಡವೆಗಳನ್ನು ಸಂಗಡ ತಕ್ಕೊಂಡು, ರಾಯಗಡಕ್ಕೆ ಹೋದನು; ಮತ್ತು ಆ ಸುಂದರಿಯನ್ನು ಶಿವಾಜಿ ಮಹಾರಾಜರಿಗೆ ಸಮರ್ಪಿಸಿದನು. ಆಗ ಮಹಾರಾಜರು ಏನೂ ಮಾತಾಡಲಿಲ್ಲ.

ಮರುದಿನ ಅವರು ದರ್ಬಾರ ನೆರೆಯಿಸಿ, ಆಬಾಜಿಗೆ ಆ ಸುಂದರಿ

ಯನ್ನು ದರ್ಬಾರಕ್ಕೆ ಕರೆತರಲು ಆಜ್ಞಾಪಿಸಿದರು. ಆಗ ಸಭಿಕರೆಲ್ಲರೂ ಉತ್ಸುಕರಾಗಿ ಕುಳಿತುಕೊಂಡರು. ಆ ಸುಂದರಿಯು ಸಭೆಗೆ ಬರಲು, ಮಹಾರಾಜರು:—"ಈ ತರುಣಿಯು ಎಷ್ಟು ಸುಂದರಿಯಾಗಿರುವಳಲ್ಲ! ದೇವರು ಈಕೆಯ ಉದರದಲ್ಲಿ ನನಗೆ ಜನ್ಮವನ್ನು ಕೊಟ್ಟಿದ್ದರೆ, ನಾನೂ ಒಳ್ಳೇ ಸುಂದರನಾಗುತ್ತಿದ್ದೆನಲ್ಲವೆ? ಉಪಾಯವಿಲ್ಲ. ಸಭಿಕರೆ, ದೈವ ಯೋಗದಿಂದ ಈಕೆಯ ಹೊಟ್ಟೆಯಲ್ಲಿ ನಾನು ಹುಟ್ಟಿ ಬರದಿದ್ದರೂ, ಈಕೆಯನ್ನು ನಾನು ನನ್ನ ತಾಯಿಯೆಂದೇ ಭಾವಿಸುವೆನು! ಆಬಾಜೀ, ಈಕೆಗೆ ಬೆಲೆಯುಳ್ಳ ವಸ್ತ್ರಾಭರಣಗಳನ್ನು ಕೊಟ್ಟು ಇವಳನ್ನು ತಕ್ಕ ಬಂದೋಬಸ್ತಿನೊಡನೆ ವಿಜಾಪುರಕ್ಕೆ ಕಳುಹಿಸು" ಎಂದು ನುಡಿದನು. ಅದರಂತೆ ಆ ತರುಣಿಯ ವ್ಯವಸ್ಥೆಯಾದ ಬಳಿಕ, ಶಿವಾಜಿಯು ಆಬಾಜಿ ಯನ್ನು ಕುರಿತು:—ವೀರನೇ, ಹೀಗೆ ಯುದ್ಧದಲ್ಲಿ ಸೆರೆ ಸಿಕ್ಕ ಸುಂದರಿ ಯರನ್ನು ಪಾಪಬುದ್ಧಿಯಿಂದ ಸೆರೆ ಹಿಡಿಯಬಾರದು. ಅವರನ್ನು ಸುರ ಕ್ಷಿತವಾಗಿ ಅವರವರ ಸ್ಥಳಕ್ಕೆ ಮುಟ್ಟಿಸಬೇಕು, ಎಂದು ನುಡಿದನು. ಆಬಾಜಿಯು ತನ್ನ ಆ ಹೇಯಕೃತಿಗೆ ನಾಚಿಕೊಂಡು ಇತಃಪರ ಹೀಗೆ ಮಾಡುವದಿಲ್ಲೆಂದು ಪಣತೊಟ್ಟನು ಬಳಿಕ ಶಿವಾಜಿ ಮಹಾರಾಜರು ಕಲ್ಯಾಣ ದುರ್ಗವನ್ನು ಕೈವಶ ಮಾಡಿಕೊಂಡದ್ದಕ್ಕೆ ಆಬಾಜಿಗೆ ಬೆಲೆ ಯುಳ್ಳ ವಸ್ತ್ರಾಭರಣಗಳನ್ನು ಕೊಟ್ಟು ಅವನನ್ನು ಗೌರವಿಸಿದರು. ಶ್ರೀ ಶಿವಾಜಿ ಮಹಾರಾಜರ ಶೀಲಪ್ರಭಾವವನ್ನು ಕಂಡು ಆತನ ವೈರಿ ಗಳೂ ಬೆರಗಾದರು! ಬಳಿಕ ಶಿವಾಜಿಮಹಾರಾಜರು ನೇತಾಜಿಯನ್ನು ಗೌರವಿಸುವದಕ್ಕಾಗಿ ಆಬಾಜಿಯ ಸಂಗಡ ವಸ್ತ್ರಾಭರಣಗಳನ್ನು ಕಳು ಹಿಸಿದ್ದಲ್ಲದೆ, ರಾಜಮಾಚಿಯ ಕಿಲ್ಲೆಯನ್ನು ಕೈವಶ ಮಾಡಿಕೊಳ್ಳ ಲಿಕ್ಕೆ ನೇತಾಜಿಯೊಬ್ಬನಿಗೇ ಅಧಿಕಾರ ಕೊಟ್ಟು ಕಳುಹಿಸಿದರು. ಆಬಾ ಜಿಯು ತಂದ ಮಹಾರಾಜರ ಆಜ್ಞಾಪತ್ರವನ್ನು ನೋಡಿ, ನೇತಾಜಿಗೆ ತುಂಬಾ ಹರುಷವಾಯಿತು. ಆತನು ಮಹಾರಾಜರು ಕಳಿಸಿರುವ ವಸ್ತ್ರಾಭರಣಗಳನ್ನು ಪ್ರೇಮದಿಂದ ಸ್ವೀಕರಿಸಿ, ರಾಜಮಾಚಿ ದುರ್ಗಕ್ಕೆ ಸಾಗಿಹೋಗುವ ಸಿದ್ಧತೆಯನ್ನು ನಡೆಸಿದನು.



# ಯಾ! ಅಲ್ಲಾ, ತೋಬಾ! ತೋಬಾ!

ನಿಜವಾದ ವೀರರಿಗೆ ಯುದ್ಧವೆಂದರೆ ಮೈಯ್ಯುಉಬ್ಬುವದು. ಶತ್ರುವು ಬಲಿಷ್ಠನಿದ್ದಷ್ಟೂ ಅವರ ಆನಂದವು ಹೆಚ್ಚಾಗುವದು. ನೇತಾಜಿಯ ಸ್ಥಿತಿಯಾದರೂ ಹೀಗೆಯೇ ಆಗಿತ್ತು. ಆತನು ನಾಮಾಂಕಿತ ವೀರನಾದ್ದರಿಂದ, ಮಹಾರಾಜರಿಂದ ಕಠಿಣ ಕೆಲಸಗಳಿಗೋಸ್ಕರವಾಗಿಯೇ ತನಗೆ ಅಪ್ಪಣೆಯಾಗಬೇಕೆಂದು ಬಯಸುತ್ತಿದ್ದನು; ಅದರಂತೆ ಅವನು ಮಹಾರಾಜರಿಗೆ ವಿನಂತಿಯನ್ನೂ ಮಾಡಿಕೊಂಡಿದ್ದನು. ತನ್ನ ವಿನಂತಿಯನ್ನು ಮನ್ನಿಸಿ ಶಿವಾಜಿ ಮಹಾರಾಜರು ರಾಜಮಾಚಿಯನ್ನು ಕೈವಶ ಮಾಡಿಕೊಳ್ಳಲಿಕ್ಕೆ ತನಗೇ ಆಜ್ಞಾಪಿಸಿದ್ದರಿಂದ, ಆ ವೀರನ ಬಾಹುಗಳು ವಿಲಕ್ಷಣ ಸ್ಫುರಣ ಹೊಂದಿದವು. ಅವನು ತನ್ನ ಸಂಗಡ ಎರಡು ಸಾವಿರ ಜನ ಮರಾಟರನ್ನು ತಕ್ಕೊಂಡು ರಾಜಮಾಚಿಯ ಕಿಲ್ಲೆಗೆ ಹೊರಟನು. ಈ ಸುದ್ದಿಯು ಕಿಲ್ಲೆಯ ಮೇಲಿನ ಮುಸಲ್ಮಾನರಿಗೆ ತಿಳಿಯಬಾರದೆಂದು ನೇತಾಜಿಯು ಬಹು ಜಾಗರೂಕನಾಗಿದ್ದನು; ಆದರೆ ದೇಶದಲ್ಲಿ ಯಾವ ಕಾಲದಲ್ಲಿಯಾದರೂ ದೇಶದ್ರೋಹಿಗಳು ಇದ್ದೇ ಇರುತ್ತಾರೆ. ಅವರು ತಮ್ಮ ಸ್ವಾರ್ಥಕ್ಕಾಗಿ ರಾಷ್ಟ್ರದ ಅಕಲ್ಯಾಣವನ್ನು ಮಾಡುತ್ತಾರೆ. ಇಂಥ ಸ್ವಾರ್ಥಪರನಾದ ಒಬ್ಬ ಗೃಹಸ್ಥನು ಕಲ್ಯಾಣದ ದುರ್ಗದಲ್ಲಿದ್ದನು. ಅವನು ವಿಜಾಪುರ ಬಾದಶಹನಿಂದ ಅಗಣಿತ ದ್ರವ್ಯ ತಕ್ಕೊಂಡು, ಮರಾಟರ ಗುಪ್ತಸಂಗತಿಗಳನ್ನು ಬಾದಶಹನಿಗೆ ತಿಳಿಸುವ ಗುತ್ತಿಗೆ ಹೊತ್ತಿದ್ದನು. ಅವನು ತನ್ನ ಆ ಕೃಷ್ಣ ಕಾರಸ್ಥಾನದ ಸುಳುವನ್ನು ಯಾರಿಗೂ ಹತ್ತಗೊಟ್ಟಿದ್ದಿಲ್ಲ. ನೇತಾಜಿಯು ಯಾವಾಗ ಕಲ್ಯಾಣದಿಂದ ಹೊರಟನೊ, ಆಗಲೆ ಇಬ್ಬರು ಸ್ವಾರರು ಕಲ್ಯಾಣದ ಬೇರೊಂದು ಬಾಗಿಲದಿಂದ ಹೊರಹೊರಟು ರಾಜಮಾಚಿಯ ದಾರಿಯನ್ನು ಹಿಡಿದರು. ಇದು ನೇತಾಜಿಯ ಲಕ್ಷ್ಯಕ್ಕೆ ಬಾರದೆ ಹೋಗಲಿಲ್ಲ. ಕೂಡಲೆ ಆ ಸ್ವಾರರನ್ನು ಬೆನ್ನಟ್ಟಲಿಕ್ಕೆ ರಾಮಜಿಗೂ ನಾನಾಜಿಗೂ ಹೇಳಿದನು. ರಾಮಜಿ-

ನಾನಾಜಿಯರಿಬ್ಬರೂ ಅವರನ್ನು ಬೆನ್ನಟ್ಟಿ ನಡೆದರು. ಮೋಸಗಾರ ರಾದ ಆ ಸ್ವಾರರ ಕುದುರೆಗಳು ಸಾಧಾರಣ ಪ್ರತಿಯವು. ಆದರಿಂದ ಸ್ವಲ್ಪ ಹೊತ್ತಿನಲ್ಲಿಯೇ ಅವರು ರಾಮಜಿ-ನಾನಾಜಿಯವರ ಕೈಗೆ ಸಿಕ್ಕರು. ಶೂರರಾದ ರಾಮಜಿ-ನಾನಾಜಿಯರಿಗೆ ಅವರನ್ನು ಕೊಲ್ಲ ಲಿಕ್ಕೆ ತಡ ಹಿಡಿಯುತ್ತಿದ್ದಿಲ್ಲ; ಆದರೆ ಅವರು ಯಾರು? ರಾಜಮಾಚಿಗೆ ಹೋಗುವದರಲ್ಲಿ ಅವರ ಉದ್ದೇಶವೇನು? ಎಂಬ ಸಂಗತಿಗಳು ಅವ ರನ್ನು ಕೊಂದರೆ ತಿಳಿಯುತ್ತಿದ್ದಿಲ್ಲ. ಆದ್ದರಿಂದ ಅವರನ್ನು ಜೀವಂತ ಹಿಡಿಯಬೇಕೆಂದು ರಾಮಜಿ-ನಾನಾಜಿಯರು ಹೆಣಗಿದರು; ಆದರೆ ಶಸ್ತ್ರಧಾರಿಗಳಾದ ಶತ್ರುಗಳನ್ನು ಜೀವಂತ ಹಿಡಿಯುವದು ಕಠಿಣವೇ ಸರಿ. ರಾಮಜಿಯು ಗುಪ್ತಕೋವಿದನಾದ್ದರಿಂದ ಅವರನ್ನು ಜೀವಂತ ಹಿಡಿದನು. ಮೊದಮೊದಲು ಅವರು ತಾವು ಯಾರೆಂಬದನ್ನು ಹೇಳ ಲಿಲ್ಲ. ಕೊನೆಗೆ ರಾಮಜಿಯು ಅವರಿಬ್ಬರನ್ನೂ ಗಿಡಕ್ಕೆ ಬಿಗಿದು ಚೆನ್ನಾಗಿ ದಂಡಿಸಲು, ಅವರು ತಮ್ಮ ನಿಜಸ್ಥಿತಿಯನ್ನು ಹೇಳಿದರು. ಆಗ ರಾಮಜಿಯು ಅವರನ್ನು ನೇತಾಜಿಯ ಬಳಿಗೆ ಹಿಡಿತಂದನು. ಕಲ್ಯಾಣದ ದುರ್ಗದಲ್ಲಿ ಶತ್ರುಗಳಿಗೆ ಫಿತೂರಾದ ಇಂಥ ಗೃಹಸ್ಥನಿರುವ ನೆಂಬದೂ, ಈ ಸ್ವಾರರು ಅವನ ಆಳುಗಳೆಂಬದೂ ತಿಳಿದು ಬರಲು, ನೇತಾಜಿಯು: “ಹಾಯ್! ಹಾಯ್! ಇಂಥ ನೀಚ ದೇಶದ್ರೋಹಿಗಳು ಇನ್ನೂ ಎಷ್ಟು ಜನರಿರುವರೋ!” ಎಂಬ ಉದ್ಗಾರಗಳನ್ನು ತೆಗೆದನು. ಬಳಿಕ ಅವನು ಅವರನ್ನು ಕಲ್ಯಾಣದ ದುರ್ಗದಲ್ಲಿರುವ ಆಬಾಜಿಯ ಕಡೆಗೆ ಕಳುಹಿಸಿದನು. ಆಬಾಜಿಯು ಇಂಥ ದೇಶದ್ರೋಹಿಗಳ ಶೋಧ ಹಚ್ಚಿ, ಅವರೆಲ್ಲರನ್ನೂ ಹಿಡಿತರಿಸಿ, ಶಿವಾಜಿ ಮಹಾರಾಜರ ಕಡೆಗೆ ಕಳಿಸಿಕೊಟ್ಟನು. ಮಹಾರಾಜರು ದೇಶದ್ರೋಹಿಗಳ ಅಪ ರಾಧವು ಅಕ್ಷಮ್ಯವೆಂದು ತಿಳಿದು, ಇಂಥ ದೇಶದ್ರೋಹಿಗಳು ಇನ್ನಾ ರಾದರೂ ಇದ್ದರೆ, ಅವರಿಗೆ ಅಂಜಿಕೆ ಹುಟ್ಟಲೆಂದು ಅವರೆಲ್ಲರನ್ನೂ ಗಲ್ಲಿಗೆ ಹಾಕಿಸಿದರು!

ಇತ್ತ ನೇತಾಜಿಯು ಮುಸಲ್ಮಾನರಿಗೆ ಸುದ್ದಿ ತಿಳಿಯದಂತೆ ರಾಜ

ಮಾಚಿಯ ಕಿಲ್ಲೆಯನ್ನು ಸಮೀಪಿಸಿದನು. ದಿನಾಲು ರಾಜಮಾಚಿಯ ಕಿಲ್ಲೆಯ ಮೇಲೆ ಹುಲ್ಲು ಹೊರೆಗಳನ್ನು ಮಾರಲಿಕ್ಕೆ ಬಹು ಜನ ಮರಾಟರು ಹೋಗುತ್ತಿದ್ದರು. ಈ ದಿವಸ ದಿನಕ್ಕಿಂತ ೨೦-೩೦ ಜನರು ಹೆಚ್ಚಿಗೆ ಕೂಡಿದ್ದರು. ದಿನಾಲು ಹುಲ್ಲು ಹೊರೆ ತರುವ ಮರಾಟರು ತಮ್ಮ ತಮ್ಮ ಹೊರೆಗಳನ್ನು ಮಾರಿ, ರೊಕ್ಕ ಇಸಗೊಂಡು ಹೋದರು; ಆದರೆ ಈ ದಿನ ಹೆಚ್ಚಾಗಿ ಬಂದವರ ಒಂದೂ ಹೊರೆಯು ಅಲ್ಲಿ ಮಾರಲಿಲ್ಲ. ಅವರು ಧಾರಣೆಯನ್ನು ವಿಪರೀತ ಹೇಳಹತ್ತಿದ್ದರಿಂದ, ಮುಸಲ್ಮಾನ ದಂಡಾಳುಗಳು ಅವರಿಗೆ ಚೇಷ್ಟೆ ಮಾಡಿ ನಕ್ಕು, ಅಣಕಿಸಿ ಹೋಗುತ್ತಿದ್ದರು. ಅವರು ಸಂಜೆಯವರೆಗೆ ಕುಳಿತರೂ ಅವರದೊಂದೂ ಹೊರೆಯು ಮಾರಲಿಲ್ಲ. ಇವರಾರೋ ಹಳ್ಳಿಯ ಹುಚ್ಚರೆಂದು ತಿಳಿದು ದಂಡಿನವರು ಹೊರಟು ಹೋದರು. ಹುಲ್ಲು ಹೊರೆ ಖರ್ಚಾಗದಿದ್ದವರು ರಾತ್ರಿಯಲ್ಲಿ ಅಲ್ಲಿಯೇ ಇದ್ದು, ಮರುದಿನ ಮಾರಿಕೊಂಡು ಹೋಗುವ ಪದ್ಧತಿಯಿತ್ತು. ಅದರಂತೆ ಈ ಜನರೂ ರಾತ್ರಿಯಲ್ಲಿ ಕಿಲ್ಲೆಯ ಮೇಲಿರುವದಕ್ಕೆ ಪರವಾನಿಗೆ ಪಡಕೊಂಡು, ಅಲ್ಲಿಯೇ ಉಳಿದರು. ಹೊತ್ತು ಮುಳುಗಿ ಕತ್ತಲೆಯಾದ ಬಳಿಕ ಅವರು ತಮ್ಮ ಹುಲ್ಲು ಹೊರೆಯೊಂದಿಗೆ ಮೆಲ್ಲನೆ ಸರಿಯುತ್ತ ದುರ್ಗದ ದಕ್ಷಿಣ ಭಾಗದಲ್ಲಿ ಒಂಟಿಯ ಗೋಣಿನಂತೆ ಬಹು ದೂರ ಹೋಗಿರುವ ಗುಡ್ಡದ ಕಡೆಗೆ ಹೋದರು. ಆ ಗುಡ್ಡವು ಬಹಳ ಕಡಿದಾಗಿತ್ತು. ಆ ಹುಲ್ಲು ಹೊರೆ ಮಾರುವವರು ಅಲ್ಲಿಗೆ ಬಂದ ಬಳಿಕ ತಮ್ಮ ತಮ್ಮ ಹೊರೆಗಳನ್ನು ಬಿಚ್ಚಿದರು. ಪ್ರತಿಯೊಬ್ಬರ ಹೊರೆಯಲ್ಲೂ ಒಂದು ಖಡ್ಗ, ಒಂದು ಢಾಲು, ಒಂದು ಹಗ್ಗ ಇಷ್ಟು ಸಾಹಿತ್ಯಗಳಿದ್ದವು. ಅವರು ಅವನ್ನು ಹೊರಗೆ ತೆಗೆದರು; ಮತ್ತು ಪ್ರತಿಯೊಬ್ಬರ ಹೊರೆಯೊಳಗಿರುವ ಹಗ್ಗಗಳನ್ನು ಒಂದಕ್ಕೊಂದು ಕೂಡಿಸಿ ಕಟ್ಟಿದರು; ಮತ್ತು ಆ ಸಂಯುಕ್ತ ಹಗ್ಗವನ್ನು ಜೋಡು ಪದರು ಮಾಡಿ ಅದರ ಒಂದು ತುದಿಯನ್ನು ಗುಡ್ಡದ ಮೇಲಿರುವ ಒಂದು ಗಿಡಕ್ಕೆ ಕಟ್ಟಿ, ಎರಡನೆಯ ತುದಿಯನ್ನು ಗುಡ್ಡದ ಕೆಳಗೆ ಕಂದಕದಲ್ಲಿ ಇಳಿಬಿಟ್ಟರು. ಅಲ್ಲಿ ನೇತಾಜಿಯು ಆರಿಸಿಟ್ಟ ಐದು ನೂರು ಜನ

ರೊಂದಿಗೆ ನಿಂತುಕೊಂಡು ಆ ಹಗ್ಗದ ದಾರಿಯನ್ನೇ ನಿರೀಕ್ಷಿಸುತ್ತಿದ್ದನು. ಕತ್ತಲೆಯಲ್ಲಿ ಹಗ್ಗವು ಕೈಗೆ ಹತ್ತಲು, ರಾಮಜಿಯು ಕಾರ್ಯವನ್ನು ಚನ್ನಾಗಿ ಸಾಧಿಸಿದನೆಂದು ಆತನಿಗೆ ಸಂತೋಷವಾಯಿತು. ಕಿಲ್ಲೆಯ ಮೇಲೆ ಹುಲ್ಲುಹೊರೆ ಮಾರುವವರ ವೇಷದಿಂದ ಹೋದ ತಮ್ಮ ಜನರು, ಎಲ್ಲಿ ಮುಸಲ್ಮಾನ ಗುಪ್ತಹೇರರ ನಜರಿಗೆ ಬಿದ್ದರೋ, ಎಂದು ನೇತಾಜಿಯು ಚಡಪಡಿಸುತ್ತಿದ್ದನು. ಹಗ್ಗವು ಕೈಗೆ ಹತ್ತಿದ್ದರಿಂದ, ಆವನ ಆ ಚಿಂತೆಯು ಬಯಲಾಯಿತು. ನೇತಾಜಿಯ ಜನರು ಗುಡ್ಡವನ್ನೇರುವದರಲ್ಲಿ ಒಳ್ಳೇ ನುರಿತವರಿದ್ದುದರಿಂದ, ಹಾ-ಹಾ ಅನ್ನುವಷ್ಟರಲ್ಲಿ ಅವರೆಲ್ಲರೂ ಕಿಲ್ಲೆಯ ಮೇಲೇರಿ ಹೋದರು. ಉಳಿದ ದಂಡಾಳುಗಳಿಗೆ ಚಂದ್ರೋದಯಕ್ಕೆ ಸರಿಯಾಗಿ ಹೆಬ್ಬಾಗಿಲಿಗೆ ಬರಬೇಕೆಂದು ನೇತಾಜಿಯು ಅಪ್ಪಣೆ ಮಾಡಿದ್ದನು. ಆಗ ಚಂದ್ರೋದಯದ ಸಮಯವಾದ್ದರಿಂದ, ನೇತಾಜಿಯು ಹೆಬ್ಬಾಗಿಲದ ಬಳಿಗೆ ಹೋಗಿ, ಕಾವಲುಗಾರರನ್ನು ಸಂಹರಿಸಿ, ಬಾಗಿಲ ತೆರೆದನು. ಮರಾಟರು ದುರ್ಗವನ್ನು ಮುತ್ತುವರೆಂಬ ಅಂಜಿಕೆಯಿರದ್ದರಿಂದ, ಎಲ್ಲ ಮುಸಲ್ಮಾನ ದಂಡಾಳುಗಳು ಅವ್ಯವಸ್ಥಿತವಾಗಿ ಮಲಗಿಕೊಂಡಿದ್ದರು. ಎರಡು ಸಾವಿರ ಜನ ಮರಾಟರು ಕಿಲ್ಲೆಯನ್ನು ಸೇರಿ, ಕೈಗೆ ಸಿಕ್ಕ ಮುಸಲ್ಮಾನರನ್ನು ತುಂಡರಿಸ ಹತ್ತಲು, "ಅರೆ ಅಲ್ಲಾ! ಅರೆ ಅಲ್ಲಾ!!" ಎಂದು ಒದರುತ್ತ, ಅವರು ದುರ್ಗದ ತುಂಬ ಓಡಾಡಹತ್ತಿದರು. ಒಬ್ಬರಿಗೆ ಖಡ್ಗಸಿಕ್ಕರೆ, ಢಾಲು ಇಲ್ಲ; ಢಾಲು ಸಿಕ್ಕರೆ, ಖಡ್ಗವಿಲ್ಲ. ಈ ರೀತಿ ದಂಡಿನಲ್ಲಿ ಅವ್ಯವಸ್ಥೆಯಾಗಲು, ಮುಸಲ್ಮಾನ ಕಿಲ್ಲೆದಾರನು ಮುಂದುಗಾಣದಾದನು! ಎಲ್ಲೆಲ್ಲಿ ನೋಡಿದರೂ ಮರಾಟರ "ಹರಹರ ಮಹಾದೇವ!" ಎಂಬ ಶಬ್ದವೇ ಕೇಳಬರಹತ್ತಿತು ಕ್ಷಣದಲ್ಲಿ ದುರ್ಗವು ಹೆಣಗಳ ರಾಶಿಯಿಂದ ತುಂಬಿತು ಇನ್ನು ತಮ್ಮ ಗತಿಯು ನೆಟ್ಟಗೆ ಕಾಣುವದಿಲ್ಲೆಂದು ಕಿಲ್ಲೆದಾರನು ಕಂಗೆಟ್ಟು, ತನ್ನ ಜನರನ್ನು ಹುರಿಮಾಡಿದನು.

ಇತ್ತ ತ್ರ್ಯಂಬಕರಾಯನು ಶ್ರೀವರ್ಧನ ಬಾಲೆಕಿಲ್ಲೆಯಲ್ಲಿ ಮಹಾರಾಜರಿಂದ ಸಹಾಯ ಬಂದೀತೆಂದು ದಾರೀ ನೋಡಿ ನೋಡಿ ಬೇಸ

ತ್ತಿದ್ದನು. ಮುಸಲ್ಮಾನರು ಕಿಲ್ಲೆಯನ್ನು ಕೆಡಹುವದಕ್ಕಾಗಿ ಕಿಲ್ಲೆಯ ಬಂಡೆಗಲ್ಲಿನಲ್ಲಿ ಬಲವಾದ ಸುರಂಗವನ್ನು ತೋಡಿದ್ದರು. ಆ ಸುರಂಗಕ್ಕೆ ಕೊಳ್ಳಿಯನ್ನು ಕೊಟ್ಟರೆ, ನಾವೆಲ್ಲರೂ ಸತ್ತುಹೋಗುವೆವೆಂದು ತಿಳಿದು, ಆತನು ಈ ದಿನ ರಾತ್ರಿಯಲ್ಲೇ ಮುಸಲ್ಮಾನರ ಮೇಲೆ ಬಿದ್ದು, ಸಂಧಿ ಸಾಧಿಸಿದರೆ, ಪಾರಾಗಿ ಹೋಗಬೇಕೆಂದು ನಿಶ್ಚಯಿಸಿದ್ದನು; ಆದರೆ ಸರಿರಾತ್ರಿಯಲ್ಲಿ 'ಹರಹರ ಮಹಾದೇವ!' ಎಂಬ ಗರ್ಜನೆಯು ಕೇಳ ಬರಲು, ಶಿವಾಜಿಮಹಾರಾಜರೇ ತನ್ನ ಸಹಾಯಕ್ಕೆ ಬಂದರೆಂದು ತಿಳಿದು, ಅವನು ಒಮ್ಮೆಲೆ ಕೋಟೆಯ ಬಾಗಿಲ ತೆರೆದು, ದುರ್ಗವನ್ನಿಳಿದು ತಾನೂ "ಹರಹರ ಮಹಾದೇವ" ಎಂದು ಗರ್ಜಿಸುತ್ತ, ತನ್ನ ಜನರೊಡನೆ ಮುಸಲ್ಮಾನರ ಮೇಲೆ ಬಿದ್ದನು. ಹೀಗೆ ಇಕ್ಕಡೆಗಳಿಂದ ಪೆಟ್ಟು ಬೀಳಹತ್ತಲು, ಮುಸಲ್ಮಾನ ಕಿಲ್ಲೆದಾರನು ಬಹಳ ಗಾಬರಿಯಾದನು. ಆಗ ಅವನಿಗೊಂದು ಹಂಚಿಕೆಯು ತೋಚಿತು. ಮರಾಟರು ಶ್ರೀವರ್ಧನ ಬಾಲೆಕಿಲ್ಲೆಯನ್ನು ೇರವು ಮಾಡಿ ಬಂದದ್ದರಿಂದ, ತಾನು ಅಲ್ಲಿ ಸೇರಿಕೊಳ್ಳಬೇಕೆಂದು ಮಾಡಿದನು. ಅವನ ಜನರೂ ಅದಕ್ಕೆ ಒಪ್ಪಿಕೊಳ್ಳಲು, "ಯಾ ಅಲ್ಲಾ! ಯಾ ಅಲ್ಲಾ! ತೋಬಾ! ತೋಬಾ!" ಎಂದು ನುಡಿಯುತ್ತ, ಮುಸಲ್ಮಾನ ಸೈನಿಕರು ಕಿಲ್ಲೆದಾರನೊಡನೆ ಶ್ರೀವರ್ಧನ ಬಾಲಕಿಲ್ಲೆಗೆ ಓಡಿಹೋದರು. ಓಡಿಹೋಗುವ ಭರದಲ್ಲಿ ಅವರಿಗೆ ಕಿಲ್ಲೆಯ ಬುಡಕ್ಕೆ ತಾವೇ ಕೊರೆದಿರುವ ಸುರಂಗದ ನೆನಪು ಆಗಲಿಲ್ಲ. ಹೀಗೆ ಬದುಕಿ ಉಳಿದ ಮುಸಲ್ಮಾನರೆಲ್ಲರೂ ಓಡಿ ಹೋಗಿ ಶ್ರೀವರ್ಧನ ಬಾಲೆಕಿಲ್ಲೆಯನ್ನು ಸೇರಿಕೊಳ್ಳಲು, ರಾಜಮಾಚಿಯಲ್ಲಿ ಉಳಿದ ಸಂಪತ್ತೆಲ್ಲ ಮರಾಟರ ಪಾಲಾಯಿತು! ತೋಫುಗಳೂ, ಅಸಂಖ್ಯ ಖಡ್ಗಗಳೂ, ಢಾಲುಗಳೂ, ಕುದುರೆಗಳೂ ಮರಾಟರ ಕೈಸೇರಿದವು. ನೇತಾಜಿಯು ವಿಜಯೋತ್ಸವದಿಂದ ಉಬ್ಬಿ, ಭಗವಾ ಝೇಂಡೆಯನ್ನು ರಾಜಮಾಚಿಯ ಕಿಲ್ಲೆಯ ಮೇಲೆ ಏರಿಸಿದನು! ಬಳಿಕ ಅವನು ಶ್ರೀವರ್ಧನ ಕಿಲ್ಲೆಯಲ್ಲಿ ಸೇರಿದ ಮುಸಲ್ಮಾನರಿಗೆ:—'ನೀವೇ ತುಂಬಿದ ಸುರಂಗಕ್ಕೆ ಕೊಳ್ಳಿ ಕೊಡಬೇಕೋ ಅಥವಾ ನಿಃಶಸ್ತ್ರರಾಗಿ ಶರಣು

ಬರುವಿರೋ?'' ಎಂದು ಹೇಳಿ ಕಳಿಸಿದನು. ಆ ಸುರಂಗದಿಂದ ಕಿಲ್ಲೆಗೆ ಧಕ್ಕೆಯಾಗಲಿಕ್ಕಿಲ್ಲೆಂಬ ಬಿಂಕದಿಂದ ಮುಸಲ್ಮಾನರು ಶರಣುಬರಲಿಕ್ಕೆ ಒಪ್ಪಲಿಲ್ಲ. ನಿರ್ವಾಹವಿಲ್ಲದೆ ನೇತಾಜಿಯು ಆ ಸುರಂಗಕ್ಕೆ ಕೊಳ್ಳಿ ಕೊಟ್ಟನು. ಬಳಿಕ ಕೇಳುವದೇನು? ಸುರಂಗಕ್ಕೆ ತೋಡಿದ ಗುಹೆಯು ಬಹು ದೊಡ್ಡದಿದ್ದದರಿಂದ, ಕಿಲ್ಲೆಯ ಕೊಡಗಲ್ಲು ಕತ್ತರಿಸಿತು. ಆಧಾರ ಸ್ತಂಭವೇ ಕಳಚಿದ ಬಳಿಕ ಕಿಲ್ಲೆಯು ಧಡಧಡನೆ ಬಿದ್ದುಬಿಟ್ಟಿತು! ಎಷ್ಟೋ ಜನ ಮುಸಲ್ಮಾನರು ಹತರಾದರು. ಉಳಿದವರು ಅಂಜಿ ನೇತಾಜಿಗೆ ಶರಣು ಬಂದರು.

---

## ಗಂಗೂಸುಂದರಿಯ ಭವಿತವ್ಯ.

ಪ್ರಿಯವಾಚಕರೇ, ಗಂಗೂಸುಂದರಿಯು ಸೆರೆಮನೆಯ ಸೋಬತಿಯಾಗಿ ಕಲ್ಯಾಣದಲ್ಲಿ ರುಸ್ತುಮ ಅಜಮಲ್ಲಖಾನನ ಆತಿಥ್ಯದಲ್ಲಿ ಉಳಿದಿರುವಳೆಂಬದು ನಿಮ್ಮ ಸ್ಮರಣದಲ್ಲಿರುವದಷ್ಟೇ? ಆದರೆ ಆಕೆಯ ಸ್ಥಿತಿಯು ಮುಂದೆ ಏನಾಯಿತೆಂಬದನ್ನು ನೋಡುವಾ.

ನೇತಾಜಿಯು ಕಲ್ಯಾಣವನ್ನು ಕೈವಶ ಮಾಡಿಕೊಂಡಾಗ ತನ್ನ ತಂಗಿಯು ಅಲ್ಲಿ ಸೆರೆಯಿರುವಳೆಂಬದು ಆತನಿಗೆ ಗೊತ್ತಾಗಿದ್ದರೆ, ಅವನು ಅವಳನ್ನು ಶೋಧ ಹಚ್ಚದೆ ಬಿಡುತ್ತಿದ್ದಿಲ್ಲ; ಆದರೆ ಆತನಿಗೆ ಈ ಸಂಗತಿಯು ಹೇಗೆ ಗೊತ್ತಾಗಬೇಕು? ಗಂಗೂಸುಂದರಿಯು ಇನ್ನೂ ಮುಸಲ್ಮಾನರ ಸೆರೆಯಲ್ಲಿ ಕೊಳೆಯುತ್ತ ಬೀಳುವ ಯೋಗವಿದ್ದದರಿಂದ, ಆಕೆಯ ಮುಕ್ತತೆಗೆ ಅನುಕೂಲ ಕಾಲವೊದಗಿರಲಿಲ್ಲ. ನೇತಾಜಿಯ ಮುತ್ತಿಗೆಯಿಂದ ಕಲ್ಯಾಣದ ದುರ್ಗವು ಕೈಬಿಡುತ್ತದೆಂದು ತಿಳಿದ ಕೂಡಲೆ, ರುಸ್ತುಮ ಅಜಮಲ್ಲನು ಗಂಗೂಸುಂದರಿಯನ್ನು ಬಲವಾದ ಕಾವಲಿನೊಡನೆ ವಿಜಾಪುರಕ್ಕೆ ಕಳುಹಿಸಿದನು. ಹೀಗೆ ವಿಜಾಪುರಕ್ಕೆ ಹೋದ ಗಂಗೂಸುಂದರಿಯು ರುಸ್ತುಮ ಅಜಮಲ್ಲನ ಮನೆಯಲ್ಲೇ ಕೊಳೆಬಿದ್ದಳು. ಕಲ್ಯಾಣದ ದುರ್ಗವು ಶತ್ರುಗಳ ಕೈವಶ ವಾದಬಳಿಕ

ರುಸ್ತುಮ ಆಜಮಲ್ಲನೂ ವಿಜಾಪುರವನ್ನು ಸೇರಿದನು. ಅವನಿಗೆ ಗಂಗೂ ಸುಂದರಿಯ ವಿಷಯವಾಗಿ ಬಹಳ ಮೋಹವುಂಟಾಗಿದ್ದದರಿಂದ ಅವನು ಬಾದಶಹನ ಬಳಿಗೆ ಹೋಗಿ, ಸೆರೆ ಸಿಕ್ಕ ಗಂಗೂ ಸುಂದರಿಯ ವಿಷಯವಾಗಿ ಎಲ್ಲ ಸಂಗತಿಗಳನ್ನು ಹೇಳಿ, ಆಕೆಯೊಡನೆ ತನ್ನ ನಿಕಾಮಾಡಬೇಕೆಂದು ಕೇಳಿಕೊಂಡನು. ಬಾದಶಹನು ಆತನ ಬೇಡಿಕೆಗೆ ಒಡಂಬಟ್ಟು, 'ನಾಳಿನ ದರ್ಬಾರದಲ್ಲಿ ಗಂಗೂ ಸುಂದರಿಯನ್ನು ತಂದು ನಿಲ್ಲಿಸು' ಎಂದು ಅಪ್ಪಣೆ ಮಾಡಿದನು. ಆಕೆಯೊಡನೆ ತನ್ನ ನಿಕಾ ಆಗಬೇಕೆಂದು ಬಾದಶಹನಿಂದ ವಚನ ತಕ್ಕೊಂಡದ್ದರಿಂದ, ರುಸ್ತುಮ ಆಜಮಲ್ಲನು ತುಂಬಾ ಸಂತೋಷಪಟ್ಟು, ನಿರ್ಭಯದಿಂದ ಮರುದಿನದ ದರ್ಬಾರಕ್ಕೆ ಗಂಗೂಸುಂದರಿಯನ್ನು ಕರೆದೊಯ್ದನು. ಪದ್ಧತಿಯಂತೆ ದರ್ಬಾರವು ಜನಸಮೂಹದಿಂದ ತುಂಬಿಹೋಗಿತ್ತು. ಅಮೀರ-ಉಮರಾವರೂ, ದೊಡ್ಡ ದೊಡ್ಡ ಸರದಾರರೂ, ಸೇನಾಪತಿಗಳೂ ಸಭೆಯನ್ನಲಂಕರಿಸಿದ್ದರು. ಸುಂದರವಾದ ಸಿಂಹಾಸನದ ಮೇಲೆ ಬಾದಶಹನು ಕುಳಿತುಕೊಂಡಿದ್ದನು. ಪರಜಾತಿಯ ಇಷ್ಟೊಂದು ಜನ ಪುರುಷರಿದ್ದಲ್ಲಿಗೆ ಗಂಗೂಸುಂದರಿಯು ಎಂದೂ ಹೋಗಿದ್ದಿಲ್ಲ. ಆದ್ದರಿಂದ ಆ ಯುವತಿಯು ಬಹಳವಾಗಿ ನಾಚಿಕೊಂಡಳು.

ಗಂಗೂಸುಂದರಿಗೆ ಈಗ ಒಳ್ಳೇ ತಾರುಣ್ಯವು ಪ್ರಾಪ್ತವಾಗಿತ್ತು. ನಿಸರ್ಗಸಿದ್ಧವಾದ ಆಕೆಯ ಸೌಂದರ್ಯವು ಬಲವಾದ ಚಿಂತೆಗಳಿಗೆ ಸಹ ಅಂಜದೆ, ಒಳ್ಳೇ ಮೋಹಕತೆಯನ್ನು ಬೀರುತ್ತಿತ್ತು. ದರ್ಬಾರದೊಳಗಿನ ಜನರು ಆಕೆಯ ಸೌಂದರ್ಯಕ್ಕೆ ಬೆರಗಾಗಿ, ಚಿತ್ರದ ಬೊಂಬೆಗಳಂತೆ ಕುಳಿತುಬಿಟ್ಟರು! ಗಂಗೂಸುಂದರಿಯು ಬಾದಶಹನ ಮುಂದೆ ಯಾವಾಗ ನಿಲ್ಲಿಸಲ್ಪಟ್ಟಿದ್ದಳೋ, ಆಗ ಬಾದಶಹನು ಆಕೆಯನ್ನು ನೋಡಿ, ಸೃಷ್ಟಿಕರ್ತನ ಕೌಶಲ್ಯದ ಬಗ್ಗೆ ಧನ್ಯೋದ್ಗಾರಗಳನ್ನು ತೆಗೆದನು. ಬಳಿಕ ಆತನು ಆಕೆಯನ್ನು ಕುರಿತು:—"ತಂಗೀ, ನಿನಗೆ ನಾನೊಂದು ಕಲ್ಯಾಣದ ಮಾರ್ಗವನ್ನು ಹೇಳುವೆನು. ನೀವು ಮರಾಟಾ ಜನರು ಕೇವಲ ಚಂಡಿ ಸ್ವಭಾವದವರು. ಕೂಳಿಲ್ಲದೆ

ಸತ್ತರೂ ಕುಲಾಭಿಮಾನವನ್ನು ಬಿಡುವದಿಲ್ಲ. ಅವಕ್ಕಾಗಿಯೇ ನಿನಗೆ ಹೇಳುತ್ತೇನೆ. ಒಂದು ವೇಳೆ ನೀನು ಅಂಥ ಸ್ವಭಾವದವಳಿರಲಿಕ್ಕಿಲ್ಲ; ಮೊದಮೊದಲು ಇದ್ದರೂ ಕಳೆದ ಎರಡು-ಎರಡೂವರೆ ವರ್ಷಗಳಿಂದ ನೀನು ರುಸ್ತುಮ ಅಜಮುಲ್ಲಖಾನನ ಆತಿಥ್ಯದಲ್ಲಿದ್ದುದರಿಂದ, ನಿನ್ನ ಸ್ವಭಾವದಲ್ಲಿ ಈಗ ಹೆಚ್ಚು-ಕಡಿಮೆಯಾಗಿರಬಹುದು. ಆದ್ದರಿಂದ ನಿನಗೆ ಬಹಳ ಹೇಳುವದಿಲ್ಲ. ನಿನ್ನ ಸಲುವಾಗಿ ಈ ಕಾಜೀಸಾಹೇಬರು ಸಿದ್ಧರಾಗಿ ಕುಳಿತಿರುತ್ತಾರೆ. ಬೇಗನೆ ಮುಸಲ್ಮಾನೀ ಧರ್ಮದ ದೀಕ್ಷೆ ಯನ್ನು ತಕ್ಕೋ; ಹಾಗು ಇಂದಿನ ವರೆಗೆ ನಿನಗೆ ಆತಿಥ್ಯವನ್ನು ಮಾಡಿದ ರುಸ್ತುಮ ಅಜಮುಲ್ಲಖಾನನೆಂಬ ಸರದಾರನನ್ನು ನಿಕಾ ಮಾಡಿಕೋ, ಎಂದು ನುಡಿದನು.

ಈ ರೀತಿಯಾಗಿ ಬಾದಶಹನು ಮಾತನಾಡಲು, ತನ್ನ ವಿಟಂಬನೆಯು ಎಷ್ಟು ರೀತಿಯಿಂದಾಗುವನೋ ಎಂದು ಮೊದಲೇ ಗಾಬರಿಯಾಗಿದ್ದ ಗಂಗೂಸುಂದರಿಯು, ಬಾದಶಹನ ಈ ಬಗೆಯ ಮಾತುಗಳಿಂದ ತಲ್ಲಣಿಸಿ ಹೌಹಾರಿ ಹೃದಯವು ಇಬ್ಭಾಗವಾಯಿತು. ಅವಳು ಚಳಿ ಬಂದವರಂತೆ ನಡುಗಲಾರಂಭಿಸಿದಳು. ವಿಲಕ್ಷಣ ಸಂತಾಪದಿಂದ ನೆಲವನ್ನು ನೋಡುತ್ತ ನಿಂತುಕೊಂಡಳು. ತನ್ನ ಮಾತಿಗೆ ಗಂಗೂಸುಂದರಿಯಿಂದ ಏನೂ ಉತ್ತರ ಬರದಿದ್ದದ್ದನ್ನು ಕಂಡು, ಬಾದಶಹನು ಸಿಟ್ಟಾಗಿ:—ನೀನು ಈಗ ಯಾರ ಮುಂದೆ ನಿಂತುಕೊಂಡಿರುತ್ತೀ ಎಂಬದರ ಎಚ್ಚರವು ನಿನಗಿದ್ದ ಪಕ್ಷದಲ್ಲಿ ನನ್ನ ಮಾತಿಗೆ ತಡ ಮಾಡದೆ ಉತ್ತರ ಕೊಡು, ಎಂದು ಗದ್ದರಿಸಿದನು. ಆಗಲೂ ಗಂಗೂಸುಂದರಿಯಿಂದ ಮಾತುಗಳು ಹೊರಡಲೇ ಇಲ್ಲ. ಆಗಂತೂ ಬಾದಶಹನು ಮತ್ತಿಷ್ಟು ಸಿಟ್ಟಾಗಿ:—ಮೂರ್ಖಳೇ, ನೀನು ಹೀಗೆ ಸುಮ್ಮನೆ ನಿಂತರೆ, ನಿನ್ನ ಮನಸ್ಸಿನ ಅಭಿಪ್ರಾಯವು ಹೇಗೆ ತಿಳಿಯಬೇಕು? ಮೌನವು ಅರ್ಧಸಮ್ಮತಿಯ ದರ್ಶಕವೆಂದು ತಿಳಿಯಲ್ಪಡುವದರಿಂದ, ಈಗಲೇ ನಿನಗೆ ಮುಸಲ್ಮಾನೀ ದೀಕ್ಷೆಯನ್ನು ಕೊಡಿಸುವೆನು, ಎಂದು ನುಡಿದು, ಕಾಜಿಗೆ ಸಂಜ್ಞೆಯನ್ನು ಮಾಡಲು, ಅವನು ಎದ್ದು ನಿಂತನು. ಈಗ

ಮಾತ್ರ ಗಂಗೂಸುಂದರಿಯಿಂದ ಸುಮ್ಮನಿರಲಿಕ್ಕಾಗಲಿಲ್ಲ; ಅವಳಿಗೆ ವಿಲಕ್ಷಣವಾದ ಧೈರ್ಯ ಬಂದಿತು. ಅವಳು ಕ್ರೋಧ ಸಂತಪ್ತಳಾದಳು! ಆದರೂ ಅವಳು ತುಸ ಸೌಮ್ಯತೆಯನ್ನು ತಂದುಕೊಂಡು ನುಡಿದ ಳೇನಂದರೆ:—"ಬಾದಶಹನೇ, ನಾನು ನಿನ್ನ ಪ್ರಜೆಗಳಲ್ಲಿ ಒಬ್ಬಳಾಗಿರುತ್ತೇನೆ. ಹೀಗಿದ್ದು ಪ್ರಜೆಗಳ ಮೇಲೆ ಹೀಗೆ ಬಲುಮೆ ಮಾಡುವದು ಬಾದಶಹನ ಕರ್ತವ್ಯವಲ್ಲ; ತಿರುಗಿ ಕೇಳಿದರೆ ನೀನು ನನ್ನನ್ನು ಅನ್ಯಾಯದಿಂದ ಸೆರೆ ಹಿಡಿದುಕೊಂಡು ಬಂದದ್ದಕ್ಕೆ ನಿನ್ನ ದಂಡಾಳುಗಳನ್ನು ದಂಡಿಸತಕ್ಕದ್ದು. ಬಾದಶಹನೇ, ನನ್ನನ್ನು ಸೆರೆಯಿಂದ ಬಿಟ್ಟುಬಿಡು; ಮರಾಟಾ ಸ್ತ್ರೀಯರು ತಮ್ಮ ಕುಲವನ್ನು ಕೆಡಿಸಿಕೊಳ್ಳಲಿಕ್ಕೆ ಎಂದೂ ಒಪ್ಪಿಕೊಳ್ಳರು. ಅವರಿಗೆ ಸುಖೋಪಭೋಗಕ್ಕಿಂತ ಶೀಲ ಪಾಲನವೇ ಹೆಚ್ಚಿನದಾಗಿರುತ್ತದೆ."

ಗಂಗೂಸುಂದರಿಯ ಈ ಬಗೆಯ ಮಾತುಗಳನ್ನು ಕೇಳಿ, ಬಾದಶಹನಿಗೆ ಮತ್ತಿಷ್ಟು ಸಂತಾಪವಾಯಿತು. ಆಗ ಅವನು:-ಮೂರ್ಖಳೇ, ಬಾದಶಹನ ಅಪ್ಪಣೆಯನ್ನು ಮೀರಿದರೆ ಏನು ಪರಿಣಾಮವಾಗುತ್ತದೆಂಬದು ನಿನಗೆ ಗೊತ್ತಿಲ್ಲವೆಂಬಂತೆ ತೋರುತ್ತದೆ, ಎಂದನು. ಅದಕ್ಕೆ ಗಂಗೂಸುಂದರಿಯು:-ಬಾದಶಹನ ಅವಕೃಪೆಗೆ ಪಾತ್ರವಾದರೆ ಮರಣ ದಂಡನೆ ವಿಧಿಸಲ್ಪಡುವದೆಂಬದು ಗೊತ್ತಿರುತ್ತದೆ. ಸದ್ಯಕ್ಕೆ ನನಗೆ ಮರಣವೇ ಬೇಕಾಗಿರುತ್ತದೆ; ಅದನ್ನೇ ತಮ್ಮ ಬಳಿಯಲ್ಲಿ ಯಾಚಿಸುತ್ತೇನೆ, ಎಂದಳು.

ಬಾದಶಹನು ಸೌಮ್ಯನಾದನು. ಅಂಜಿಸಬೇಕೆಂಬ ಅವನ ಅಬ್ಬರವು ಕಡಿಮೆಯಾಯಿತು. ಆಗ ಅವನು:—"ತಂಗೀ, ಹೀಗೆ ಮೂರ್ಖತನವನ್ನು ಹಿಡಿಯಬೇಡ. ಅಲ್ಲಾನು ನಿನ್ನನ್ನು ಬರಿಯ ಸಾಯಲಿಕ್ಕೆಂದೇ ಹುಟ್ಟಿಸಿಲ್ಲ. ಸಾಯುವದು ಕೊನೆಗೆ ಇದ್ದೇ ಇರುವದು; ಆದರೆ ಅಲ್ಲಾನು ನಿನಗೆ ಕೊಟ್ಟಿರುವ ಈ ಸುಂದರ ದೇಹದ ಸೌಖ್ಯವನ್ನು ಮನಸೋಕ್ತವಾಗಿ ಅನುಭವಿಸು; ಇತ್ತ ನೋಡು. ಈ ರುಸ್ತುಮ ಅಜಮಲ್ಲ ಸರದಾರನು ನಿನ್ನ ರೂಪಕ್ಕೆ ಲುಬ್ಧನಾಗಿ ಕುಳಿತಿರುವನು.

ಇವನಂಥ ದೊಡ್ಡ ಸರದಾರನು ನಿನ್ನ ಪೂರ್ವ ಪುಣ್ಯದಿಂದಲೇ ನಿನಗೆ ದೊರೆತಿರುವನು. ಇವನೊಡನೆ ನಿಕಾ ಮಾಡಿಕೊಂಡು ಸುಖದಿಂದ ಬಾಳು." ಎಂದು ಪುನಃ ಹೇಳಿದನು.

ಈ ರೀತಿಯಾಗಿ ಬಾದಶಹನು ಎಷ್ಟು ಹೇಳಿದರೂ ಗಂಗೂಸುಂದರಿಯು ತನ್ನ ಹಟವನ್ನು ಬಿಡಲಿಲ್ಲ. ದರ್ಬಾರದೊಳಗಿನ ಎಲ್ಲ ಜನರೂ ಚಡಪಡಿಸಿದರು. ಈ ನೊಂಡ ಹುಡುಗೆಯು ಚೆಂಡಿತನದಿಂದ ಬಾದಶಹನ ದಂಡನೆಗೆ ಗುರಿಯಾಗಿ ವ್ಯರ್ಥವಾಗಿ ಕೆಡುವಳು. ಈ ಮರಾಟರಿಗೇನು ಹುಚ್ಚು ಹಿಡಿದಿರಬಹುದೇ? ಎಂದು ಮಾತಾಡಿಕೊಳ್ಳಹತ್ತಿದರು. ಬರ ಬರುತ್ತ ಬಾದಶಹನ ಮುಖ-ಮುದ್ರೆಯು ಅತ್ಯುಗ್ರವಾಯಿತು. ಅವನು ಸಿಟ್ಟಿನಿಂದ ಗಂಗೂಸುಂದರಿಗೆ ಮರಣದಂಡನೆಯನ್ನು ವಿಧಿಸಿದನು. ದೂತರು ಆಕೆಯನ್ನು ಸೆರೆಮನೆಗೆ ಎಳೆದೊಯ್ದರು. ದರ್ಬಾರವು ಬರಖಾಸ್ತವಾಯಿತು! ಆದರೆ ರುಸ್ತುಮನಿಗೆ ಮಾತ್ರ ಮರಣಪ್ರಾಯವಾದ ದುಃಖವಾಯಿತು. ಗಂಗೂಸುಂದರಿಯ ಬದಲು ಅವನಿಗೇ ಮರಣದಂಡನೆಯಾದಂತಾಯಿತು! ಕೂಡಲೆ ಅವನು ಬಾದಶಹನ ದಿವಾಣಖಾನೆಗೆ ಹೋದನು. ರುಸ್ತುಮನ ಸಣ್ಣಮೋರೆಯನ್ನು ನೋಡಿ ಬಾದಶಹನು ನಕ್ಕು:—"ಯಾಕೆ ರುಸ್ತುಮ, ಆ ಮರಾಟರ ಹುಡಿಗೆಯು ನಿನ್ನನ್ನು ತಿರಸ್ಕರಿಸಿದಳೆಂದು ಸಣ್ಣ ಮೋರೆ ಮಾಡಿರುವೆಯೇನು?" ಎಂದನು. ಆಗ ರುಸ್ತುಮನು ಕುರ್ನಿಸ ಮಾಡಿ:—"ಜಹಾಂಪನಾ, ಆ ಹುಡಿಗೆಗೆ ದೇಹಾಂತ ಶಿಕ್ಷೆಯನ್ನು ವಿಧಿಸಿದ್ದಕ್ಕೆ ನನಗ ಅತ್ಯಂತ ದುಃಖವಾಗಿರುವದು. ಆಕೆಯ ಮನಸ್ಸನ್ನೊಲಿಸಲಿಕ್ಕೆ ಇನ್ನೂ ಪ್ರಯತ್ನ ಮಾಡಲು ನನ್ನ ಮನಸ್ಸು ಹಾತೊರೆಯುವದು." ಎಂದು ದೈನ್ಯದಿಂದ ನುಡಿದನು. ಬಾದಶಹನು ರುಸ್ತುಮನ ಅಭಿಪ್ರಾಯವನ್ನು ತಿಳಿದು ನಕ್ಕನು; ಮತ್ತು ನುಡಿದನೇಂದರೆ:—"ರುಸ್ತುಮ, ನಿನ್ನ ಸಲುವಾಗಿ ಆ ಹುಡುಗೆಯ ಮರಣ ದಂಡನೆಯ ಶಿಕ್ಷೆಯನ್ನು ರಹಿತಪಡಿಸಿರುತ್ತೇನೆ. ನೀನು ಆಕೆಯನ್ನು ನಿನ್ನ ಮನೆಗೆ ಕರೆದೊಯ್ಯು, ಅವಳು ನಿನ್ನನ್ನು ನಿಕಾ ಮಾಡಿ

ಕೊಳ್ಳಲಿಕ್ಕೆ ಒಪ್ಪಿಕೊಳ್ಳುವ ಹಾಗೆ ಪ್ರಯತ್ನ ಮಾಡು; ಆದರೆ ನನ್ನ ಸಮಕ್ಷ ನಿಕಾ ಆದ ಹೊರತು ನೀನು ಆಕೆಯನ್ನು ಸ್ಪರ್ಶಿಸಲಾಗದು! ಇದಕ್ಕೆ ತಪ್ಪಿದಲ್ಲಿ ಕಠಿಣತರವಾದ ದಂಡನೆಗೆ ಗುರಿಯಾದೀ! ಎಚ್ಚರಿಕೆಯಿಂದಿರು!!"

ಬಾದಶಹನು ಹೀಗೆ ಕಠೋರವಾಗಿ ಮಾತನಾಡಿದರೂ ಗಂಗೂಸುಂದರಿಯು ಮರಣದಂಡಣೆಯನ್ನು ತಪ್ಪಿಸಿದ್ದಕ್ಕೆ ಅವನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಅವನು ಕೂಡಲೆ ಬಾದಶಹನಿಗೆ ಕುರ್ನಿಸ ಮಾಡಿ ಹೊರಟನು. ಬಳಿಕ ಅವನು ದೂತರಿಂದ ಗಂಗೂಸುಂದರಿಯನ್ನು ಬಿಡಿಸಿ, ಅವಳನ್ನು ತನ್ನ ಮನೆಗೆ ಕರೆದೊಯ್ದನು. ದೂತರು ವಧಸ್ಥಳಕ್ಕೆ ಒಯ್ಯುವಾಗ ಆಕೆಯ ಮುಖವು ಪ್ರಫುಲ್ಲಿತವಾಗಿತ್ತು. "ದೇವರು ನನ್ನ ಮೊರೆ ಕೇಳಿದನು. ಯಾವ ಬಗೆಯ ವಿಟಂಬನೆಯೂ ಆಗದೆ ನಾನು ಪಾರಾದೆನು. ಇನ್ನು ಸ್ವಲ್ಪ ಹೊತ್ತಿನಲ್ಲಿ ನನ್ನ ಜೀವವು ಈ ಜಡ ಶರೀರವನ್ನು ತ್ಯಜಿಸಿ, ಈ ಪಾಪಮಯವಾದ ಲೋಕವನ್ನು ಬಿಟ್ಟು ಹೋಗುವದು" ಎಂದು ಅವಳು ಮನಸ್ಸಿನಲ್ಲೇ ಪರಮಾತ್ಮನ ಉಪಕಾರವನ್ನು ಸ್ಮರಿಸುತ್ತಿದ್ದಳು. ಅಷ್ಟರಲ್ಲಿ ರುಸ್ತುಮನು ಬಂದು ಮರಣದಂಡನೆಯು ತಿರುಗಿತೆಂದು ಹೇಳಲು, ಅವಳ ಆ ಆನಂದವೆಲ್ಲ ಒಮ್ಮೆಲೆ ಮಾಯವಾಯಿತು! ಅವಳ ಹೃದಯವನ್ನು ಮತ್ತೆ ಅನಿವಾರವಾದ ದುಃಖವು ಮುಸುಕಿತು.

ಆದರಿಂದ ರುಸ್ತುಮ ಅಜಮಲ್ಲನ ಜೊತೆಗೆ ಅವನ ಮನೆಗೆ ಹೋಗುವಾಗ ತಾನು ಈಗ ನಿಜವಾದ ವಧಸ್ಥಾನಕ್ಕೆ ಹೋಗುವೆನೆಂಬ ಭಾಸವು ಅವಳಿಗೆ ಆಯಿತು. ಅವಳು ದಯಾಘನನಾದ ಪರಮೇಶ್ವರನನ್ನು ಕುರಿತು ಬಹಳವಾಗಿ ಮೊರೆಯಿಟ್ಟಳು; ಇನ್ನು ಈ ದುಷ್ಟಯವನನು ತನ್ನ ಸತ್ವಶೀಲವನ್ನು ಹರಣ ಮಾಡದೆ ಬಿಡುವದಿಲ್ಲೆಂದು ತಿಳಿದಳು. ರುಸ್ತುಮನ ಅಂತಃಪುರವೆಂದರೆ, ಅವಳಿಗೆ ಪ್ರತ್ಯಕ್ಷ ಯಮಾಲಯವೆಂದೇ ತೋರಹತ್ತಿತು. ಅವಳು ದಿನದಿನಕ್ಕೆ ಸೊರಗಹತ್ತಿದಳು.

ರುಸ್ತುಮ ಅಜಮಲ್ಲನಿಗೆ ಗಂಗೂಸುಂದರಿಯ ಕ್ಷೀಣತೆಯ ಕಾರ

ಣವು ಗೊತ್ತಾಯಿತು. ಆವನು ಒಂದು ದಿನ ಆಕೆಯನ್ನು ಕುರಿತು:—
"ಗಂಗೂ, ಇಷ್ಟೇಕೆ ಸೊರಗಹತ್ತಿದೆ? ನಾನು ನಿನ್ನ ಮೇಲೆ ಬಲಾತ್ಕರಿಸುವೆನೆಂದು ನೀನು ಅಂಜಿಕೊಂಡಿರುವೆಯೇನು? ಛೇ! ಹಾಗೆಂದಿಗೂ ತಿಳಿಯಬೇಡ. ನೀನು ಸಂತೋಷದಿಂದ ನನ್ನನ್ನು ನಿಕಾ ಮಾಡಿಕೊಳ್ಳಲಿಕ್ಕೆ ಒಪ್ಪಿದ ಹೊರತು, ನಾನು ನಿನ್ನನ್ನು ಸ್ಪರ್ಶಿಸುವದಿಲ್ಲ. ಇದರಂತೆ ಬಾದಶಹನ ಆಜ್ಞೆಯೂ ನನಗಾಗಿರುತ್ತದೆ. ಯಾವ ದಿವಸ ನೀನು ಸಂತೋಷದಿಂದ ಒಪ್ಪಿಕೊಳ್ಳುವೆಯೋ, ಅಂದೇ ನೀನು ನನಗೆ ಸ್ವಸ್ತ್ರೀಯಾಗುವಿ; ಅಲ್ಲಿಯ ವರೆಗೆ ನೀನು ನನಗೆ ಪರಸ್ತ್ರೀಯಳೇ ಸರಿ! ನಿನ್ನ ಮೇಲೆ ಬಲುಮೆ ಮಾಡಬೇಕಾಗಿದ್ದರೆ, ನಾನು ಇಷ್ಟು ದಿವಸ ಬಿಡುವ ಕಾರಣವೇ ಇದ್ದಿಲ್ಲ." ಎಂದು ನುಡಿದನು. ಬಾದಶಹನ ಅಪ್ಪಣೆಯಾಗಿದೆ, ಎಂಬದನ್ನು ಕೇಳಿ ಗಂಗೂ ಸುಂದರಿಗೆ ತುಸ ಸಮಾಧಾನವಾಯಿತು; ಮತ್ತು ಆಗಿನಿಂದ ಆವಳ ಮನಸ್ಸಿನ ತಳಮಳವೂ ಸ್ವಲ್ಪ ಕಡಿಮೆಯಾಯಿತು.

ರುಸ್ತುಮನು ಮುಂದೆ ಬಹು ದಿವಸಗಳ ವರೆಗೆ ಆಕೆಯ ಮನಸ್ಸನ್ನೊಲಿಸಲಿಕ್ಕೆ ಪ್ರಯತ್ನ ಮಾಡಿದನು. ಮರಾಟಾ ದಾಸಿಯರಿಂದ ಹೇಳಿಸಿ ನೋಡಿದನು. ಏನಾದರೂ ಆ ಖಂಬೀರ ಸ್ತ್ರೀಯು ಮನಸೋಲಲಿಲ್ಲ. ರುಸ್ತುಮನು ತೀರ ನಿರಾಶನಾದನು; ಆದರೂ ಅವನು ಗಂಗೂ ಸುಂದರಿಯು ತನ್ನ ಮನೆಯಲ್ಲಿದ್ದರೆ ಸಾಕು; ನಿತ್ಯ ಆಕೆಯ ದರ್ಶನವಾದರೆ ಸಾಕು, ಎಂಬ ಸಂತೋಷವನ್ನು ತಾಳಿ ಇರಹತ್ತಿದನು.



# ಸ್ವಜನದ್ರೋಹಿಗೆ ತಕ್ಕ ಶಾಸನ!

ಚಂದ್ರರಾವ ಮೋರೆ ಎಂಬೊಬ್ಬ ಸರದಾರನು ವಿಜಾಪುರ ಬಾದಶಹನು ದರ್ಬಾರದಲ್ಲಿ ಪ್ರಮುಖನಾಗಿದ್ದನು. ಆತನು ಜಾತಿಯಿಂದ ಮರಾಟನಾಗಿದ್ದನು. ಅವನ ವರ್ಚಸ್ಸು ಮರಾಟರಲ್ಲಿ ವಿಶೇಷವಾಗಿತ್ತು ಶಿವಾಜಿ ಮಹಾರಾಜರು ಸ್ವರಾಜ್ಯಸ್ಥಾಪನೆಯ ಕಾರ್ಯವನ್ನು ಕೈಕೊಂಡಮೇಲೆ, ಅವರು ಮರಾಟರನ್ನು ತಮ್ಮ ಕಡೆಗೆ ಒಲಿಸಿಕೊಳ್ಳುವ ಪ್ರಯತ್ನವನ್ನು ನಡಿಸಿದ್ದರು. ಸಣ್ಣಪುಟ್ಟ ಶೂರ ಸರದಾರರೂ, ಎಷ್ಟೋ ಜನ ನಾಮಾಂಕಿತ ಶೂರರೂ ಅವನನ್ನು ಕೂಡಿಕೊಂಡಿದ್ದರು. ಅವರಿಗೆ ಕೂಡದೆ ಇದ್ದ ಜನರೂ ಅಸಂಖ್ಯಾಕರಾಗಿದ್ದರು. ಮೇಲೆ ಹೇಳಿದ ಚಂದ್ರರಾವ ಮೋರೆ ಎಂಬವನು ಶಿವಾಜಿ ಮಹಾರಾಜರಿಗೆ ಕೂಡದೆ ಇದ್ದವರಲ್ಲಿ ಒಬ್ಬ ಪ್ರಮುಖನಾಗಿದ್ದನು. ಆತನನ್ನು ಸಾಮೋಪಾಯದಿಂದ ತಮ್ಮ ಪಕ್ಷಕ್ಕೆ ಒಲಿಸಿಕೊಂಡರೆ, ಸ್ವರಾಜ್ಯಸ್ಥಾಪನೆಗೆ ವಿಶೇಷ ಬಲ ಬರುವದೆಂದು ಮಹಾರಾಜರು ಭಾವಿಸಿದ್ದರು. ಇದಕ್ಕಾಗಿ ಅವರು ನಮ್ಮ ಕಥಾನಾಯಕನಾದ ನೇತಾಜಿಯನ್ನು ನಿಯಮಿಸಿದ್ದರು. ನೇತಾಜಿಯು ಚಂದ್ರರಾಯನನ್ನು ಮಹಾರಾಜರ ಪಕ್ಷಕ್ಕೆ ಒಲಿಸುವದಕ್ಕೆ ಒಪ್ಪಿಕೊಂಡು, ತನ್ನ ಆರಿಸಿದ ಹತ್ತಿಪ್ಪತ್ತು ಜನರೊಂದಿಗೆ ಅವನಲ್ಲಿಗೆ ಬಂದನು. ಯುದ್ಧದ ಕೆಲಸವಾಗಿದ್ದರೆ, ನೇತಾಜಿಯು ತತ್ ಕ್ಷಣದಲ್ಲೇ ಕಾರ್ಯವನ್ನು ಸಾಧಿಸಿಬಿಡುತ್ತಿದ್ದನು; ಆದರೆ ಪ್ರಕೃತದ ಕೆಲಸವು ಯುದ್ಧಮುಖವುಳ್ಳದ್ದಾಗಿದ್ದಿಲ್ಲ; ನಿಯೋಗಿಯ ಕೆಲಸವಾಗಿತ್ತು. ಚಂದ್ರರಾಯನಿಗೆ ಸ್ವಾಭಿಮಾನದ ಮಾತುಗಳನ್ನು ಹೇಳಿ, ಅವನಲ್ಲಿ ಮುಸಲ್ಮಾನರ ವಿಷಯಕ್ಕೆ ತಿರಸ್ಕಾರವನ್ನು ಹುಟ್ಟಿಸಿ, ಮಹಾರಾಜರ ವಿಷಯಕ್ಕೆ ಪ್ರೇಮಬುದ್ಧಿಯನ್ನುಂಟುಮಾಡಬೇಕಾಗಿತ್ತು. ಈ ಕೆಲಸವು ಕೇವಲ ವಾಕ್ ಚಾತುರ್ಯವನ್ನೇ ಅವಲಂಬಿಸಿರುವದೆಂಬದನ್ನು ಹೇಳುವ ಕಾರಣವಿಲ್ಲ. ನೇತಾಜಿಯಲ್ಲಿ ಮೇಲಾದ ವಾಕ್ ಚಾತುರ್ಯವೂ ಇತ್ತು; ಆದರೆ ನಿದ್ದೆ ಹತ್ತಿರುವಂತೆ ವೇಷ ತಾಳಿರುವವರನ್ನು ಎಚ್ಚರಿ

ಸುವದೆಂತು? ಅದರಂತೆ ಚಂದ್ರರಾಯನ ಸ್ಥಿತಿಯಾಗಿತ್ತು. ನೇತಾಜಿಯು ತನ್ನ ಸಂಗಡ ಚಂದ್ರರಾಯನಿಗೆ ದರ್ಶನ ಕಾಣಿಕೆಯೆಂದು ಕೊಡುವದಕ್ಕಾಗಿ ಸುಂದರವಾದ ಪೋಷಾಕನ್ನು ಒಯ್ದಿದ್ದನು. ಚಂದ್ರರಾಯನು ನೇತಾಜಿಯ ಆತಿಥ್ಯವನ್ನು ಚೆನ್ನಾಗಿ ಮಾಡಿದನು. ಮರುದಿನ ಚಂದ್ರರಾಯನ ದಿವಾಣಖಾನೆಯಲ್ಲಿ ದರ್ಬಾರವು ಕೂಡಿತು. ಆ ಕಾಲಕ್ಕೆ ನೇತಾಜಿಯು ತಾನು ತಂದಿದ್ದ ಪೋಷಾಕನ್ನು ಚಂದ್ರರಾಯನಿಗೆ ಅರ್ಪಿಸಿ, ನುಡಿದನೇನಂದರೆ:—"ಚಂದ್ರರಾವಜಿ, ಶಿವಾಜಿಮಹಾರಾಜರು ವಿಜಾಪುರ ಬಾದಶಹ ಅಥವಾ ದಿಲ್ಲೀ ಬಾದಶಹರಂತೆ ವೈಭವಶಾಲಿಗಳಲ್ಲವೆಂಬದೇನೋ ನಿಜವು; ಆದರೆ ಅವರು ಸ್ವರಾಜ್ಯ ಸಂಸ್ಥಾಪಕತ್ವದ ಕಾರ್ಯವನ್ನು ಕೈಕೊಂಡಿದ್ದರಿಂದ, ಅವರ ಮಹತ್ವವು ನಮಗೆ ಬಾದಶಹನಿಗಿಂತಲೂ ಅಧಿಕವಾಗಿದೆ. ಈ ದೃಷ್ಟಿಯಿಂದ ಅವರು ಕಳಿಸಿರುವ ಪೋಷಾಕನ್ನು ನೀವು ಧರಿಸಬೇಕೆಂದು ಅಪೇಕ್ಷಿಸುತ್ತೇನೆ"

ಚಂದ್ರರಾಯನು ನೇತಾಜಿಯು ಅರ್ಪಿಸಿದ ಪೋಷಾಕನ್ನು ಸ್ವೀಕರಿಸಿದನು. ದರ್ಬಾರದ ಜನರು ಚಂದ್ರರಾಯನು ಶಿವಾಜಿ ಮಹಾರಾಜರಿಗೆ ಕೂಡಿಕೊಳ್ಳುವನೋ ಹೇಗೆಂದು ಸಾಂಶಕ ಮನಸ್ಕರಾದರು. ಆ ದಿವಸ ಇದಕ್ಕೂ ಹೆಚ್ಚಿನ ಯಾವ ಕೆಲಸವೂ ಆಗದೆ, ಸಭೆಯು ವಿಸರ್ಜಿಸಲ್ಪಟ್ಟಿತು. ಮುಂದೆ ಸಂಧಿಯನ್ನು ಸಾಧಿಸಿ, ನೇತಾಜಿಯು ತಾನು ಬಂದ ಕಾರಣವನ್ನು ಚಂದ್ರರಾಯನಿಗೆ ತಿಳಿಸಿ, ಅವನ ಒಪ್ಪಿಗೆಯನ್ನು ಪಡೆಯಲು ಹವಣಿಸಿದನು; ಆದರೆ ಚಂದ್ರರಾಯನು ಮನಸ್ಸಿನಿಂದ ಶಿವಾಜಿಯನ್ನು ತಿರಸ್ಕರಿಸುತ್ತಿದ್ದನು. 'ಶಿವಾಜಿಯು ಮೂರು ದಿನದವನು; ಬಾದಶಾಹಿಯು ಆಚಂದ್ರಾರ್ಕ ನಡೆಯುವಂಥಾದ್ದು' ಎಂಬದು ಚಂದ್ರರಾಯನ ಮತವಾಗಿತ್ತು. ಅವನು ಯಾವಾಗಲೂ ವಿಜಾಪುರದ ದರ್ಬಾರದಲ್ಲಿರುತ್ತಿದ್ದುದರಿಂದ, ನೇತಾಜಿಯ ಪರಾಕ್ರಮವನ್ನೂ ಪ್ರಸಿದ್ಧಿಯನ್ನೂ ಕೇಳಿದ್ದನು. ಅನಾಯಾಸವಾಗಿ ಇಂಥ ಶೂರನು ಕೈಗೆ ಸಿಕ್ಕಿರಲು, ಇವನನ್ನು ಬಿಡಬಾರದೆಂದು ಆತನು ಮನಸ್ಸಿನಲ್ಲಿ ಯೋಚಿಸಿ, ನೇತಾಜಿಯನ್ನು ಕುರಿತು:—"ನೇತಾಜಿರಾಯರೇ,

ಈ ಮಾತನ್ನು ವಿಚಾರಿಸಿ ತಿಳಿಸುವೆನು'' ಎಂದು ನುಡಿದನು.

ಸರಳ ಮನಸ್ಸಿನ ನೇತಾಜಿಗೆ ಚಂದ್ರರಾಯನ ಕಾಪಟ್ಯದ ಮನೋಭಾವವು ತಿಳಿಯಲಿಲ್ಲ. ಆವನು ಚಂದ್ರರಾಯನಿಂದ ಒಪ್ಪಿಗೆ ಪಡೆದು, ಕಾರ್ಯವನ್ನು ಯಶಸ್ವೀಯಾಗಿ ಮಾಡಿಕೊಂಡೇ ಹೋಗಬೇಕೆಂದು ನಾಲ್ಕು ದಿನ ಅಲ್ಲಿಯೇ ನಿಂತುಕೊಂಡನು. ಚಂದ್ರರಾಯನು ತನ್ನ ಮೋಸವು ನೇತಾಜಿಗೆ ತಿಳಿಯಬಾರದೆಂದು ಅವನ ಆದರಾತಿಥ್ಯವನ್ನು ಚೆನ್ನಾಗಿ ನಡೆಸಿದನು.

ಚಂದ್ರರಾಯನ ಮಾತು-ಕಥೆಗಳಿಂದ, ಆದರಾತಿಥ್ಯದಿಂದ ಅವನು ಶಿವಾಜಿ ಮಹಾರಾಜರಿಗೆ ಕೂಡಿಕೊಳ್ಳಬಹುದೆಂದು ನೇತಾಜಿಗೂ ತೋರಹತ್ತಿತು. ಪ್ರಸಂಗ ಬಂದಾಗೆಲ್ಲ ಅವನು ಚಂದ್ರರಾಯನ ಮುಂದೆ ಶಿವಾಜಿಯ ಪ್ರಭಾವವನ್ನೂ ಅವನು ಆರಂಭಿಸಿದ ಕಾರ್ಯದ ಮಹತ್ವವನ್ನೂ ಅವನ ಮೇಲಿದ್ದ ಶ್ರೀ ಅಂಬಾಭವಾನಿಯ ಕೃಪೆಯನ್ನೂ ವರ್ಣಿಸುತ್ತಿದ್ದನು; ಅವನ್ನೆಲ್ಲ ಆಸ್ಥೆಯಿಂದ ಕೇಳುತ್ತಿರುವಂತೆ ಚಂದ್ರರಾಯನು ನಟಿಸುತ್ತಿದ್ದನು! ಅವನು ತನ್ನ ವರ್ತನದಲ್ಲಿ ನೇತಾಜಿಗೆ ಕಿಂಚಿತ್ತಾದರೂ ಸಂಶಯಬಾರದಂತೆ ವ್ಯವಸ್ಥೆಯನ್ನಿಟ್ಟಿದ್ದನು.

ಹೀಗೆ ಆ ಆದರಾತಿಥ್ಯದಲ್ಲಿ ೮-೧೦ ದಿನಗಳು ಕಳೆದವು; ನೇತಾಜಿಯು ವ್ಯರ್ಥ ಕಾಲ ಕಳೆಯಲಾರದೆ:—''ಬಹಳ ದಿನಗಳಾದವು; ಏನೆಂಬದನ್ನು ಹೇಳಿರಿ'' ಎಂದು ಚಂದ್ರರಾಯನಿಗೆ ಗಂಟು ಬಿದ್ದನು. ಈ ಅವಧಿಯಲ್ಲಿ ಚಂದ್ರರಾಯನು ವಿಜಾಪುರಕ್ಕೆ ವರದಿಯನ್ನು ಮುಟ್ಟಿಸಿದನು. ಯಾಕಂದರೆ ತಾನೇ ತನ್ನ ಮನೆಯಲ್ಲಿ ನೇತಾಜಿಯನ್ನು ಸೆರೆಹಿಡಿದು ವಿಜಾಪುರಕ್ಕೆ ಕಳಿಸಿದರೆ, ಈ ಸುದ್ದಿಯು ಶಿವಾಜಿಗೆ ಹತ್ತಿ, ಅವನು ತನ್ನ ಜಹಾಗೀರನ್ನು ಹಾಳು ಮಾಡುವನೆಂಬ ಅಂಜಿಕೆಯು ಅವನಗಿತ್ತು. ಆದ್ದರಿಂದ ಆವನು ನೇತಾಜಿಯನ್ನು ಬಾದಶಹನ ಜನರ ಕಡೆಯಿಂದಲೇ ಅಡವಿಯಲ್ಲಿ ಸೆರೆಹಿಡಿಸಬೇಕೆಂದು ಯೋಚಿಸಿದ್ದನು. ಸಂಕೇತದಂತೆ ವಿಜಾಪುರದವರು ಒಪ್ಪಿಕೊಳ್ಳಲು, ಚಂದ್ರರಾಯನು ಒಂದು ದಿವಸ ಬೇಟೆಯಾಡಲಿಕ್ಕೆಂದು ನೇತಾಜಿಯನ್ನು

ಅರಣ್ಯಕ್ಕೆ ಕರೆದೊಯ್ದನು. ಮನೆಯಲ್ಲಿ ಕುಳಿತು ಕುಳಿತು ಬೇಸರ ಬಂದದ್ದರಿಂದ, ಆತನು ಒಳ್ಳೇ ಹುರುಪಿನಿಂದ ಬೇಟೆಯಾಡಲಿಕ್ಕೆ ಹೋದನು. ಆತನು ಆ ದಿನ ಮೂರು ನಾಲ್ಕು ಹುಲಿಗಳನ್ನು ಹೊಡೆದು ದಣಿದು, ಚಂದ್ರರಾಯನು ಸಿದ್ಧಪಡಿಸಿದ್ದ ಶಿಬಿರಕ್ಕೆ ಬಂದನು. ಅಲ್ಲಿ ಅವನ ಊಟದ ವ್ಯವಸ್ಥೆಯು ಮಾಡಲ್ಪಟ್ಟಿತ್ತು. ಚಂದ್ರ ರಾಯನು ನೇತಾಜಿಯ ಮೃಗಯಾವಿಹಾರದ ಕುಶಲತೆಯನ್ನು ಬಣ್ಣಿ ಸುತ್ತ ಆತನೊಡನೆ ಊಟ ಮಾಡಿದನು. ಊಟವಾದ ಬಳಿಕ ನೇತಾ ಜಿಯು ಆ ಶಿಬಿರದಲ್ಲೇ ಸ್ವಲ್ಪ ಅಡ್ಡಾದನು. ದಣುವಿಕೆಯಾದ್ದರಿಂದ ಆತನಿಗೆ ತುಸ ಹೊತ್ತಿನಲ್ಲಿ ಜಂಪು ಹತ್ತಿತು. ಕೆಲ ಹೊತ್ತಿನ ಮೇಲೆ ನೇತಾಜಿಯು ಎಚ್ಚತ್ತು ನೋಡುವಷ್ಟರಲ್ಲಿ ಆ ಶಿಬಿರಕ್ಕೆ ಹತ್ತಿಪ್ಪತ್ತು ಜನ ಮುಸಲ್ಮಾನರು ಮುತ್ತಿಗೆಯನ್ನು ಹಾಕಿದ್ದರು! ಶಿಬಿರದಲ್ಲಿ ಚಂದ್ರ ರಾಯನಾಗಲಿ, ಆತನ ಆಳು-ಹೋಳುಗಳಾಗಲಿ ಯಾರೂ ಇರಲಿಲ್ಲ. ನೇತಾಜಿಯ ಬಳಿಯಲ್ಲಿ ಆಯುಧವೂ ಇರಲಿಲ್ಲ! ಆಗ ನೇತಾಜಿಗೆ ಚಂದ್ರರಾಯನ ಕೃಷ್ಣ ಕಾರಸ್ಥಾನವೆಲ್ಲ ಹೊಳೆಯಿತು. ಮಾಡುತ್ತಾ ನೇನು? ಆಗ ಆ ವೀರನಿಗೆ ವಿಲಕ್ಷಣ ಸಂತಾಪವಾಗದೆ ಇರಲಿಲ್ಲ. ಆ ಸಂತಾಪದ ಭರದಲ್ಲಿ ಅವನು:—"ಚಂದ್ರರಾವ, ಮುರುವು ಇಟ್ಟು, ಆಕಳ ತಲೆ ಹೊಡೆವಂತೆ ಮಾಡಿದಿಯಾ? ಮೂರ್ಖ, ನಾನೊಬ್ಬ ಕ್ಷುಲ್ಲಕನು ಸತ್ತರೆ, ಶಿವಾಜಿ ಮಹಾರಾಜರ ಸ್ವರಾಜ್ಯದ ಕಾರ್ಯವು ನಿಲ್ಲುವುದೆ? ಇಂಥ ದೇಶದ್ರೋಹದ ನಿನ್ನ ಆಚರಣೆಯಿಂದ ನಿನ್ನ ವಂಶ ವು ಮಾತ್ರ ನಿಃಪಾತವಾಗುವದು" ಎಂದು ನುಡಿದು ಬಿಟ್ಟನು. ಆ ವೀರಶಿರೋಮಣಿಯು ಸಂತಾಪದಿಂದ ನುಡಿದ ಆ ವಾಣಿಯು ಮುಂದೆ ನಿಜವಾಗಿಯೂ ದಿಟವಾಯಿತು.

ಮುತ್ತಿಗೆ ಹಾಕಿದ ಮುಸಲ್ಮಾನರು ನೇತಾಜಿಯು ಏಳುವ ದಾರಿ ಯನ್ನೇ ಕಾಯುತ್ತಿದ್ದರು. ನೇತಾಜಿಯು ಎದ್ದು ಕುಳಿತು ಈ ರೀತಿ ಬಡಬಡಿಸಹತ್ತಲು, ಅವರು ನಗುತ್ತ ಒಳಗೆ ಬಂದರು; ಮತ್ತು ನಗ ನಗುತ್ತ ನೇತಾಜಿಯ ಕೈ-ಕಾಲುಗಳನ್ನು ಪ್ರತಿಬಂಧಿಸಹೋದರು. ಈ

ಕಾಲಕ್ಕೆ ನೇತಾಜಿಯ ಬಳಿಯಲ್ಲಿ ಖಡ್ಗವಿದ್ದರೆ, ಆ ವೀರನು ಆ ಇಪ್ಪತ್ತೂ ಜನ ಮುಸಲ್ಮಾನ ಶಿಪಾಯಿಗಳ ಶಿರಗಳನ್ನು ಧರೆಗಿಳಿಸದೆ ಬಿಡುತ್ತಿದ್ದಿಲ್ಲ; ಆದರೆ ನೀಚನಾದ ಚಂದ್ರರಾಯನು ಆವನ ಖಡ್ಗ ವನ್ನು ಸಹ ತಕ್ಕೊಂಡು ಹೋಗಿದ್ದನು. ಆದರೂ ನೇತಾಜಿಯು ತನ್ನ ಸನಿಯಕ್ಕೆ ಬಂದವರನ್ನು ಮುಷ್ಟಿಪ್ರಹಾರದಿಂದ ಮೇಲಕ್ಕೇಳದಂತೆ ಮಾಡಹತ್ತಿದನು. ಆಗ ಮುಸಲ್ಮಾನರೆಲ್ಲರೂ ಒಮ್ಮೆಲೆ ಮುಗಿಬಿದ್ದು, ಅವನ ಪೆಟ್ಟುಗಳನ್ನು ಸಹಿಸುತ್ತ, ಹೇಗಾದರೊಮ್ಮೆ ಅವನನ್ನು ಪ್ರತಿ ಬಂಧಿಸಬೇಕಾದರೆ ಅವರಿಗೆ ಸಾಕುಸಾಕಾಗಿ ಹೋಯಿತು! ನೇತಾಜಿಯ ಸಾಮರ್ಥ್ಯವು ಎಷ್ಟೆಂಬದು ಅವರ ಅನುಭವಕ್ಕೆ ಚೆನ್ನಾಗಿ ಬಂದು ಹೋಯಿತು. ಬಳಿಕ ಆ ಮುಸಲ್ಮಾನರು ನೇತಾಜಿಯನ್ನು ಸಾತಾರೆಯ ಕೋಟೆಗೆ ಸಾಗಿಸಿಕೊಂಡು ಹೋಗಿ, ಅಲ್ಲಿ ಅವನನ್ನು ಸೆರೆಯಲ್ಲಿರಿಸಿದರು. ಇತ್ತ ಚಂದ್ರರಾಯನು ಬೇಟೆಯಾಡಲಿಕ್ಕೆ ಹೋದಾಗ ನೇತಾಜಿಯು ಸತ್ತನೆಂದು ಸುಳ್ಳು ಸುದ್ದಿಯನ್ನು ಹುಲುಬಿಸಿ ಬಿಟ್ಟನು!

ಈ ಸುದ್ದಿಯು ಶಿವಾಜಿಮಹಾರಾಜರಿಗೆ ತಿಳಿಯಿತು. ನೇತಾಜಿಯು ಹುಲಿಯ ಬಾಯಿಗೆ ಬಿದ್ದು ಸತ್ತನೆಂಬ ಸುದ್ದಿಯು ಸುಳ್ಳು ಇದ್ದು, ಇದರಲ್ಲಿ ಚಂದ್ರರಾಯನು ಏನೋ ಮೋಸಮಾಡಿರುವನೆಂಬದು ಅವರಿಗೆ ಹೊಳೆಯದೆ ಇರಲಿಲ್ಲ. ಆಗ ಅವರು ಚಂದ್ರರಾಯನ ಪಾರುಪತ್ಯಮಾಡುವದಕ್ಕೋಸ್ಕರ ರಾಘೋಬಾ ಬಲ್ಲಾಳ ಎಂಬ ಶೂರನನ್ನು ಕಳುಹಿಸಿದರು. ಚಂದ್ರರಾಯನಿಗೆ ಏನು ಶಿಕ್ಷೆ ಮಾಡಬೇಕೆಂಬದನ್ನು ಆತನಿಗೆ ಹೇಳಿದ್ದರು. ರಾಘೋಬನು ಚಂದ್ರರಾಯನಲ್ಲಿಗೆ ಹೋದನು. ಆತನು ಹೋದ ಬಳಿಕ ಶಿವಾಜಿಮಹಾರಾಜರು ಸ್ವತಃ ತಾವೇ ಆರಿಸಿದ ಸೈನ್ಯವನ್ನು ತಕ್ಕೊಂಡು ಹೋಗಿ ಮಹಾಬಳೇಶ್ವರ ಗುಡ್ಡದಲ್ಲಿ ಅಡಗಿ ನಿಂತರು. ನೇತಾಜಿಗೆ ಹೇಗೆ ವಿಶ್ವಾಸಘಾತ ಮಾಡಿದ್ದನೋ, ಹಾಗೆಯೇ ಮಾಡಬೇಕೆಂದು ಚಂದ್ರರಾಯನು ರಾಘೋಬನನ್ನೂ ಅಡವಿಗೆ ಕರೆದೊಯ್ದನು. ರಾಘೋಬನಾದರೂ ಆ ಸಂಧಿಯನ್ನೇ ಕಾಯುತ್ತಿದ್ದನು; ಕೂಡಲೆ ರಾಘೋಬನು ಖಡ್ಗ

ವನ್ನೆತ್ತಿ ವಿಶ್ವಾಸಘಾತುಕರಿಗೆ ಯಮಲೋಕದಲ್ಲಿ ಯಾವ ಶಿಕ್ಷೆಯಾಗುತ್ತದೆಂಬದನ್ನು ತಿಳಿಸುವದಕ್ಕಾಗಿಯೋ ಏನೋ ಎಂಬಂತೆ ಚಂದ್ರರಾಯನನ್ನು ಸಂಹರಿಸಿದನು. ಆಗ ಅವನ ತಮ್ಮ ಸೂರ್ಯರಾಯನೂ ಸಂಹೃತನಾದನು. ಬಳಿಕ ಶಿವಾಜಿಮಹಾರಾಜರು ಚಂದ್ರರಾಯನ ವಾಸಸ್ಥಳವಾದ ಜಾವಳಿಯ ಮೇಲೆ ಸಾಗಿ ಹೋದರು. ಜಾವಳಿಯಲ್ಲಿ ಹನುಮಂತರಾಯನೆಂಬ ಒಬ್ಬ ಶೂರ ಸರದಾರನಿದ್ದನು. ತನ್ನ ಯಜಮಾನನು ಸತ್ತು ಹೋಗಿದ್ದರೂ, ಅವನು ಶಿವಾಜಿಮಹಾರಾಜರೊಡನೆ ಘನಘೋರವಾಗಿ ಕಾದಿದನು. ಮಹಾರಾಜರು ಅವನನ್ನೂ ಯುದ್ಧದಲ್ಲಿ ಸಂಹರಿಸಿಬಿಟ್ಟರು. ಆಗ ಚಂದ್ರರಾಯನ ಸೈನ್ಯವು ದಿಕ್ಕೆಟ್ಟು ಓಡಿತು! ಚಂದ್ರರಾಯನಿಗೆ ಬಾಜೀರಾವ, ಕೃಷ್ಣರಾವ ಎಂಬ ಇಬ್ಬರು ಮಕ್ಕಳಿದ್ದರು. ಅವರು ಮಹಾರಾಜರ ಸೆರೆಯಲ್ಲಿ ಸಿಕ್ಕರು. ಎಷ್ಟೋ ಮಾವಳೀ ಜನರು ಶಿವಾಜಿಮಹಾರಾಜರಿಗೆ ಶರಣು ಬಂದು, ಅವರನ್ನು ಕೂಡಿಕೊಂಡರು. ಚಂದ್ರರಾಯನ ಸಂಪತ್ತನ್ನೆಲ್ಲ ಮಹಾರಾಜರು ಹರಣ ಮಾಡಿದರು. ಸೆರೆಸಿಕ್ಕ ಆತನ ಇಬ್ಬರು ಮಕ್ಕಳನ್ನು ಮಹಾರಾಜರು ಪುರಂದರದ ಕಿಲ್ಲೆಯಲ್ಲಿ ಸೆರೆಯಿರಿಸಿದರು; ಆದರೆ ಆ ಹುಡುಗರು ಅಲ್ಲಿಯ ಕಾವಲುಗಾರರನ್ನು ಒಡಕೊಳ್ಳಲಿಕ್ಕೆ ಪ್ರಯತ್ನ ನಡೆಸಿದ್ದರಿಂದ, ಮಹಾರಾಜರು ಅವರನ್ನೂ ಪುಣೆಯಲ್ಲಿ ಕೊಲ್ಲಿಸಿಬಿಟ್ಟರು!

---

## ವತ್ಸಾ, ಹೀಗೆ ಮಲಗಿದರೆ ಆಗುವದೇನು?

೩೦ ದಿನ ಪ್ರಕರ್ಣದಲ್ಲಿ ನೇತಾಜಿಯನ್ನು ಸಾತಾರೆಯಲ್ಲಿ ಸೆರೆಯಿರಿಸಿದರೆಂದು ಹೇಳಿದೆಯಷ್ಟೇ? ಆಗ ಅಲ್ಲಿಯ ಕಿಲ್ಲೇದಾರನಾಗಿದ್ದ ಫಾಜಲಖಾನನೆಂಬವನು ಮರಾಟರ ಅತ್ಯಂತ ದ್ವೇಷಿಯಾಗಿದ್ದನು; ಯಾಕಂದರೆ, ಈ ಫಾಜಲಖಾನನೇ ಅಫಜುಲಖಾನನ ಮಗನು. ಅಫಜುಲಖಾನನನ್ನು ಶಿವಾಜಿಯು ಕೊಂದಾಗಿನಿಂದ ಅವನು ಮರಾಟರನ್ನು ಕಂಡರೆ ನಾಗರ ಹಾವನ್ನು ಕಂಡಂತೆ ದ್ವೇಷಿಸುತ್ತಿದ್ದನು. ಇಂಥ ಕಿಲ್ಲೆ

ದಾರನ ಕೈಯಲ್ಲಿ ನೇತಾಜಿಗೆ ಸೆರೆಯಾಳಾಗುವ ಪ್ರಸಂಗ ಬಂದಿತು; ಆದರೆ ಆ ಕಿಲ್ಲೆದಾರನು ನೇತಾಜಿಯನ್ನು ಬಹು ಸೌಜನ್ಯರೀತಿಯಿಂದ ನಡೆಸಿಕೊಳ್ಳಹತ್ತಿದನು. ನೇತಾಜಿಯಂಥ ಶೂರ ಸರದಾರನು-ಮರಾಟರ ಇಂಗಿತವನ್ನು ಬಲ್ಲಂಥವನು-ಶಿವಾಜಿಯಿಂದ ಒಡೆದು ನಮ್ಮನ್ನು ಕೂಡಿದರೆ, ಶಿವಾಜಿಯನ್ನು ನಿರ್ನಾಮಗೊಳಿಸಲಿಕ್ಕೆ ಬಹಳ ಅನುಕೂಲವಾಗುವದೆಂದು ಫಾಜಲಖಾನನು ಭಾವಿಸಿದ್ದನು. ಆದ್ದರಿಂದಲೇ ಅವನು ನೇತಾಜಿಯೊಡನೆ ಪ್ರೇಮದಿಂದ ನಡೆದು, ಅವನಿಗೆ ಜಹಾಗೀರಿನ ಆಶೆಯನ್ನು ತೋರಿಸಹತ್ತಿದನು; ಸುಭೇದಾರಿಕೆಯನ್ನು ಕೊಡಿಸುತ್ತೇನೆಂದು ಹೇಳಿದನು; ಆದರೆ ಬಾಲ್ಯಾರಭ್ಯ ಸ್ವದೇಶ ಸೇವೆಗೆಂದು ಟೊಂಕಕಟ್ಟಿದ ನೇತಾಜಿಯು, ಮುಸಲ್ಮಾನರ ಈ ಆಮಿಷಕ್ಕೆ ಮರುಳಾಗುವನೇ? ಅತನು ಕಿಲ್ಲೆದಾರನಿಗೆ ಸ್ಪಷ್ಟವಾಗಿ ಹೇಳಿದನೇನಂದರೆ:-"ಕಿಲ್ಲೇದಾರ, ನೀನು ನನ್ನ ವಿಷಯವಾಗಿ ಎಷ್ಟು ಪ್ರೇಮವನ್ನು ತೋರಿಸಿದರೂ, ಬರಿಯ ಸುಭೇದಾರಿಕೆಯೇ ಏಕೆ, ಖುದ್ದ ಬಾದಶಹನ ವಜೀರನ ಕೆಲಸವನ್ನು ಕೊಡಿಸುತ್ತೇನೆಂದು ವಚನ ಕೊಟ್ಟರೂ, ನಾನು ನನ್ನ ಒಡೆಯನ ಮೇಲೆ ತಿರುಗಿ ಬೀಳಲಾರೆನು; ಸ್ವದೇಶ ದ್ರೋಹವನ್ನು ಮಾಡಲಾರೆನು. ಸ್ವದೇಶೋದ್ಧಾರದ ಮುಂದೆ ನನ್ನ ಜೀವಿತವು ಕೂಡ ನನಗೆ ತೃಣದಂತಿರುತ್ತದೆ. ಅಂದಬಳಿಕ ಮಿಕ್ಕ ವೈಭವಗಳ ಪಾಡೇನು?"

ಕಿಲ್ಲೆದಾರನು ನೇತಾಜಿಯ ಈ ಸ್ಪಷ್ಟ ಮಾತುಗಳನ್ನು ಕೇಳಿ ಆಶ್ಚರ್ಯಗೊಂಡನು! ಮರಾಟರು ಸ್ವದೇಶಹಿತದ ಸಲುವಾಗಿ ಪ್ರತ್ಯಕ್ಷ ತಮ್ಮ ಜೀವದ ಮೇಲೆ ಸಹ ಹೇಗೆ ಉದಾರರಾಗುವರೆಂಬದೇ ಅವನ ಆಶ್ಚರ್ಯಕ್ಕೆ ಕಾರಣವಾಯಿತು. ಆತನು ನಿರಾಶನಾದನು. ಬಳಿಕ ಅವನು ನೇತಾಜಿಯ ವಿಷಯಕ್ಕೆ ಅತ್ಯಂತ ದ್ವೇಷವನ್ನು ತಾಳಿದನು. ಈತನನ್ನು ಅನೇಕ ಬಗೆಯಿಂದ ಹಿಂಸೆಪಡಿಸಿಯಾದರೂ ತನ್ನ ಪಕ್ಷಕ್ಕೆ ಒಲಿಸಿಕೊಳ್ಳಬೇಕೆಂದು ನಿರ್ಧರಿಸಿದನು. ಬಳಿಕ ಫಾಜಲಖಾನನು ನೇತಾಜಿಯನ್ನು ಸಾಧಾರಣ ಕೊಠಡಿಯೊಳಗಿಂದ ತೆಗಿಸಿ, ಕಗ್ಗತ್ತಲು ಕವಿದಿ

ರುವ ಒಂದು ನೆಲಮನೆಯಲ್ಲಿಟ್ಟನು. ಈ ನೆಲಮನೆಯು ದುರ್ಗದ ಕಡೆಯ ಭಾಗಕ್ಕೆ ಕಂದಕಕ್ಕೆ ಹೊಂದಿ ಇತ್ತು. ಇದರಲ್ಲಿ ಸೂರ್ಯ ಕಿರಣಗಳ ಪ್ರವೇಶವಾಗುವ ಹಾಗಿದ್ದಿಲ್ಲ. ನೆಲಮನೆಯು ಸಿದ್ಧವಾದಂದಿನಿಂದ ಇಂದಿನ ವರೆಗೆ ಅದರಲ್ಲಿ ಎಷ್ಟೋ ಜನರನ್ನು ಸೆರೆಯಿಟ್ಟಿದ್ದರು. ಅವರೆಲ್ಲರ ಮಲ-ಮೂತ್ರಗಳಿಂದ ಆ ನೆಲಮನೆಯು ದುರ್ಗಂಧಮಯವಾಗಿತ್ತು. ಇಂಥ ಸ್ಥಳದಲ್ಲಿ ಆ ಕಿಲ್ಲೆದಾರನು ನೇತಾಜಿಯನ್ನು ಬುದ್ಧಿಪೂರ್ವಕವಾಗಿ ಇರಿಸಿದನು. ನೆಲಮನೆಗೆ ಒಂದೇ ಬಾಗಿಲವಿತ್ತು. ಅದು ಕಬ್ಬಿಣದ ಒಂಬತ್ತು ಗಜಗಳಿಂದ ಅತ್ಯಂತ ಭದ್ರವಾಗಿತ್ತು. ಕಿಲ್ಲೆದಾರನು ನೇತಾಜಿಯ ವಿಷಯದಲ್ಲಿ ಕೇವಲ ಆಸುರೀ ವೃತ್ತಿಯಿಂದ ನಡೆಯಹತ್ತಿದನು ಆತನು ಇಷ್ಟು ಕಠೋರವಾಗಿ ನಡೆದರೂ ನೇತಾಜಿಯ ಪೂರ್ವಪುಣ್ಯದಿಂದ ಅವನಿಗೆ ಮರಾಟಾಜಾತಿಯವರಿಂದಲೇ ಅನ್ನ-ನೀರುಗಳು ಕೊಡಲ್ಪಡುತ್ತಿದ್ದವು ಕಿಲ್ಲೆದಾರನು ದಿನಾಲು ಅವನ ಬಳಿಗೆ ಹೋಗಿ:-"ಎಲೋ ಕಾಫರ, ಇನ್ನಾದರೂ ನೀನು ನಿಮ್ಮ ಸೈತಾನೀ ಧರ್ಮವನ್ನು ತ್ಯಜಿಸಿ, ಮುಸಲ್ಮಾನನಾಗಲಿಕ್ಕೆ ಒಪ್ಪುವಿಯಾ? ಬಾದಶಹನ ಪಕ್ಷಕ್ಕೆ ಕೂಡುವಿಯಾ?" ಎಂದು ಕೇಳುತ್ತಿದ್ದನು. ನೇತಾಜಿಯು ಕಿಲ್ಲೆದಾರನ ಆ ರಾಕ್ಷಸೀ ಕೃತ್ಯಕ್ಕೆ ಅಂಜುವದರ ಬದಲು ಅತ್ಯಂತ ಸಂತಾಪಗೊಂಡು, ಅವನು ಪ್ರಶ್ನೆ ಮಾಡಿದಾಗೆಲ್ಲ ಅವನನ್ನು ಬಾಯಿಗೆ ಬಂದಂತೆ ಬೆಯ್ಯುತ್ತಿದ್ದನು!

ಹೀಗೆ ನೇತಾಜಿಯ ಹಿಂಸೆ ನಡೆದಿರಲು, ಈತನು ತಮ್ಮ ಪಕ್ಷಕ್ಕೆ ಕೂಡುವದಿಲ್ಲೆಂದು ಫಾಜಲಖಾನನು ತಿಳಿದನು. ಬಳಿಕ ಅವನು ನೇತಾಜಿಯನ್ನು ಅತ್ಯಂತ ಕ್ರೂರತನದಿಂದ ಕೊಲ್ಲಬೇಕೆಂದು ಯೋಚಿಸಿ, ಒಂದು ದಿನ ಅವನ ಬಳಿಗೆ ಹೋಗಿ, ನೇತಾಜಿಯನ್ನು ಕುರಿತು ನುಡಿದನೇನಂದರೆ:—"ಎಲೊ, ಕಾಫರ! ಇದು ವರೆಗೆ ನಿನಗೆ ಎಷ್ಟು ಬಗೆಯಿಂದ ಹಿಂಸೆ ಕೊಟ್ಟರೂ ನೀನು ನಿನ್ನ ಧರ್ಮಾಭಿಮಾನ-ಪಕ್ಷಾಭಿಮಾನವನ್ನು ಬಿಡಲೊಲ್ಲೆ. ನೀನು ನಮ್ಮ ಪಕ್ಷಕ್ಕೆ ಕೂಡಿದ್ದರೆ, ರಾಜಭೋಗವನ್ನು ಹೊಂದುತ್ತಿದ್ದಿ; ಆದರೆ ಮೂರ್ಖನಾದ ನಿನ್ನಲ್ಲಿ

ಆ ರಾಜವೈಭವವನ್ನು ಅನುಭವಿಸುವಷ್ಟು ಸುಬುದ್ಧಿಯು ಹೇಗೆ ಹುಟ್ಟ ಬೇಕು? ಯಾವದೊಂದು ಬಿಲದಲ್ಲಿ ಇಲಿ-ಹೆಗ್ಗಣಗಳು ಸಿಕ್ಕು ಸಾಯು ವಂತೆ ಸಾಯುವ ಯೋಗವನ್ನು ಅಲ್ಲಾನು ನಿನ್ನೀ ಹಣೆಯಲ್ಲಿ ಬರೆ ದಂತೆ ತೋರುತ್ತದೇ. ನಿನಗೆ ಇನ್ನು ಒಂಬತ್ತೇ ದಿನಗಳ ಅವಕಾಶ ಕೊಟ್ಟಿರುತ್ತೇನೆ. ಅಷ್ಟರಲ್ಲಿ ನೀನು ನಿನ್ನ ಚಂಡಿತನವನ್ನು ಬಿಡ ದಿದ್ದರೆ ಇಲ್ಲಿಯೇ ನಿನ್ನ ಮರಣವೆಂದು ತಿಳಿದುಕೊ. ಈ ನೆಲಮನೆಗೆ ಒಂಬತ್ತು ಗಜಗಳ ಬಾಗಿಲು ಇದೆಯಷ್ಟೆ? ಉಪ್ಪಾರರು ದಿನಾಲು ಒಂದೊಂದು ಗಜಕ್ಕೆ ಕಲ್ಲುಗಚ್ಚಿನಿಂದ ಕಟ್ಟಿ, ಅದನ್ನು ಭದ್ರಗೊಳಿಸು ವರು. ಒಂಬತ್ತನೇ ದಿವಸ ಈ ಬಾಗಿಲವು ಪೂರ್ಣವಾಗ ಮುಚ್ಚಲ್ಪಡು ವದು. ಆದ್ದರಿಂದ ನೀನು ಒಳಗೆ ಸಿಕ್ಕು ಅನ್ನ-ನೀರು, ಅಷ್ಟೇ ಏಕೆ, ಹವೆಯ ಅಭಾವದಿಂದ ತಳಮಳಿಸಿ, ಸಂಕಟಪಟ್ಟು, ಒದ್ದಾಡಿ ಪ್ರಾಣ ಬಿಡುವೆ! ನಿಮ್ಮಂಥ ಮೂರ್ಖರಿಗೆ ಮರಣವು ಕೂಡ ಸೌಖ್ಯದಿಂದ ಬರುವದಿಲ್ಲ. ಇನ್ನಾದರೂ ವಿಚಾರ ಮಾಡು'' ಎಂದು ನುಡಿದು, ಉಪ್ಪಾರರಿಂದ ಅಂದು ಒಂದು ಗಜಕ್ಕೆ ಗಲ್ಲುಗಚ್ಚಿನಿಂದ ಗೋಡೆಯನ್ನು ಕಟ್ಟಿಸಿ ಹೊರಟು ಹೋದನು.

ಕಿಲ್ಲೆದಾರನು ಈ ರೀತಿ ಕಠೋರವಾಗಿ ಮಾತನಾಡಿ ಒಂದು ಗಜಕ್ಕೆ ಗೋಡೆಯನ್ನು ಕಟ್ಟಿಸಿ ಹೋಗಲು, ನೇತಾಜಿಯು ತನ್ನ ನೂರು ವರ್ಷಗಳ ಆಯುಶ್ಯವು ತುಂಬಿತೆಂದೇ ಭಾವಿಸಿದನು. ಇಲಿ, ಹೆಗ್ಗಣ ಗಳಂತೆ ಬಿಲದಲ್ಲಿ ಸಿಕ್ಕು ಸಾಯುವಹೊತ್ತು ಬಂತೆಂದು ಅವನು ನಿಶ್ಚಯವಾಗಿ ತಿಳಿದನು; ಆದರೆ ಆ ಧೀರನು ತನ್ನ ಖಂಬೀರತನವನ್ನು ಮಾತ್ರ ಬಿಡಲಿಲ್ಲ. ಮರಣವು ಹುಟ್ಟಿದ ಪ್ರತಿಯೊಂದು ಪ್ರಾಣಿಗೂ ಸಿದ್ಧವಾದದ್ದೇ; ಆದರೆ ಅದಕ್ಕೇಕೆ ಚಡಪಡಿಸಬೇಕೆಂದು ಅವನು ಸಂ- ತೋಷವನ್ನು ತಾಳಿದನು; ಆದರೂ ತಾನು ಮಾಡಬೇಕೆಂದಿದ್ದ ಮಹಾ ರಾಜರ ಸೇವೆಯು ಮಾತ್ರ ಪೂರ್ಣವಾಗದ್ದರಿಂದ ಅವನಿಗೆ ಆಗಾಗ್ಗೆ ವ್ಯಸನವಾಗುತ್ತಿತ್ತು. ಅವನಿಗೆ ತಾನು ಮಾಥೇರಾನ ಗುಡ್ಡದಲ್ಲಿರು ವಾಗ ತನ್ನ ಗುರುಗಳು ಮಾಡಿದ ಬೋಧವೂ ಅವರ ಆಶೀರ್ವಾದವೂ

ನೆನಪಿಗೆ ಬರಹತ್ತಿದವು. ಆಗ ಅವನ ಅಂತಃಕರಣವು ತುಂಬಿ ಬರ ಹತ್ತಿತು. ಅವನು ಗುರುಗಳನ್ನು ಪ್ರೇಮದಿಂದ ಸ್ಮರಿಸಿ:—ಗುರುಗಳೇ, ನಿಮ್ಮ ಸೇವೆಯಿಂದ ನನ್ನ ಜನ್ಮವು ಧನ್ಯವಾಗಿರುವದು. ನಿಮ್ಮ ಕೃಪೆ ಯಿಂದಲೇ ಇದು ವರೆಗೆ ನನ್ನ ಧರ್ಮಶ್ರದ್ಧೆಯು ಸ್ಥಿರವಾಗಿರುತ್ತದೆ; ಆದರೆ ಸ್ವದೇಶಸೇವೆಯನ್ನು ಬಹು ದಿವಸ ಮಾಡುತ್ತೀ, ಎಂಬ ನಿಮ್ಮ ಆಶೀರ್ವಾದವು ಮಾತ್ರ ಸುಳ್ಳಾಗುವ ಲಕ್ಷಣ ತೋರಹತ್ತಿದೆ. ಗುರು ಮಹಾರಾಜರೇ, ನಿಮ್ಮ ಆಶೀರ್ವಾದ ಬಲದಿಂದ ನನಗೆ ಇಷ್ಟಾದರೂ ಸ್ವದೇಶ ಸೇವೆಯು ಸಿಕ್ಕಿತು. ಮಹಾರಾಜರ ಚರಣ ಸೇವೆಯು ನನಗೆ ಲಭಿಸಿತು. ಇಂದಿಗೆ ನಾನೇ ಧನ್ಯನು. ನಾನು ಗುಹೆಯಲ್ಲಿ ಆನಂದ ದಿಂದ ಮರಣ ಹೊಂದುವೆನು. ಖಾನನು ಅಂದಂತೆ ನಾನು ಸಂಕಟ ಪಡುವದಿಲ್ಲ, ಒದ್ದಾಡುವದಿಲ್ಲ. ಗುರುಮಹಾರಾಜರೇ, ನೀವು ಹೇಳಿ ದಂತೆ ಶಿವಾಜಿಮಹಾರಾಜರು ಪ್ರತ್ಯಕ್ಷ ಶಂಕರನೇ ಅಹುದು. ಹಾಗಲ್ಲ ದಿದ್ದರೆ ಆ ಮಹಾತ್ಮನಿಗೆ ಇಷ್ಟೊಂದು ವಿಜಯವೂ, ವಿವೇಕವೂ ಲಭಿಸ ಬಹುದೇ? ಸುಂದರ ಹೆಂಗಸೆಂದರೆ, ಜಗತ್ತೇ ಬಾಯಿ ತೆರೆಯುವದು; ಆದರೆ ಆ ಮಹಾತ್ಮನು ಎಂಥ ಸ್ವರ್ಗೀಯ ಸುಂದರಿಯಿದ್ದರೂ, ಪರ ಸ್ತ್ರೀಯನ್ನು ಪಾಪಬುದ್ಧಿಯಿಂದ ನೋಡಿರುವದಿಲ್ಲ. ಧನ್ಯ! ಶಿವಾಜಿ ಮಹಾರಾಜರೇ, ನೀವೇ ಧನ್ಯರು!! ನಿಮ್ಮ ಚರಣ ಸೇವೆಯು ಈ ಬಡ ದಾಸನಿಗೆ ಬಹಳ ದಿವಸ ಲಭಿಸಲಿಲ್ಲ!

ಈ ರೀತಿಯಾಗಿ ನೇತಾಜಿಯು ಮನಸ್ಸಿನಲ್ಲಿ ಯೋಚಿಸುತ್ತ ಕಾಲಹರಣ ಮಾಡತೊಡಗಿದನು. ಅವನು ತನ್ನ ಮನೋಭೂಮಿಕೆ ಯಲ್ಲಿ ಗುರುಮಹಾರಾಜರ ದಿವ್ಯ ಮೂರ್ತಿಯನ್ನು ಸ್ಥಾಪಿಸಿ, ಅವರ ಆರಾಧನೆಯಲ್ಲಿ ನಿರತನಾದನು. ಹಸಿವೆ-ನೀರಡಿಕೆಗಳ ಪರಿವೆಯು ಅವ ನಿಗೆ ತಪ್ಪಿತು. ಗುರುಮಹಾರಾಜರು ಕಲಿಸಿದ ಯೋಗಾಭ್ಯಾಸವು ಈ ಕಾಲಕ್ಕೆ ಅವನಿಗೆ ಒಳ್ಳೇ ಉಪಯೋಗಕ್ಕೆ ಬಿದ್ದಿತು; ಒಂದೆರಡು ದಿವಸ ನೇತಾಜಿಗೆ ಒಪ್ಪತ್ತೇ ಆಹಾರವನ್ನು ಕೊಟ್ಟರು. ಮುಂದೆ ಅದನ್ನೂ ಕಟ್ಟು ಮಾಡಿದರು. ದಿನಾಲು ಕಿಲ್ಲೇದಾರನು ನೆಲಮನೆಗೆ ಬಂದು

ನೇತಾಜಿಯು ಅಂಜಿಕೊಂಡಿರುವನೋ-ಏನೋ ಎಂಬದನ್ನು ನೋಡಿ ಹೋಗುತ್ತಿದ್ದನು. ಹೀಗೆ ಏಳು ದಿವಸಗಳು ಕಳೆದವು. ನೆಲಮನೆಯ ಬಾಗಿಲು ಪೂರ್ಣವಾಗಿ ಬಂದಾಗುವದಕ್ಕೆ ಇನ್ನು ಎರಡೇ ದಿವಸಗಳ ಅವಕಾಶ ಉಳಿಯಿತು. ಆ ದಿವಸ ಕಿಲ್ಲೆದಾರನು ನೇತಾಜಿಗೆ ಬಹಳವಾಗಿ ಅಂದನು; ಆದರೂ ಆ ವೀರನು ಅದಕ್ಕೆ ಚೆನ್ನಾಗಿ ಪ್ರತ್ಯುತ್ತರವನ್ನು ಕೊಟ್ಟನು. ಆಗ ಕಿಲ್ಲೆದಾರನು ನೇತಾಜಿಯನ್ನು ಬೈಯುತ್ತ ಹೊರಟು ಹೋದನು.

ಆ ದಿವಸ ರಾತ್ರಿಯಲ್ಲಿ ನೇತಾಜಿಯು ಸ್ವಪ್ನದಲ್ಲಿ ಒಬ್ಬ ಜಟಾಧಾರಿಯಾದ ಯೋಗಿಯು ಬಂದನು. ಅವನು ಅತ್ಯಂತ ತೇಜಸ್ವಿಯಾಗಿದ್ದನು. ಕಾಲಲ್ಲಿ ಆವುಗೆಗಳನ್ನು ಮೆಟ್ಟಿದ್ದನು. ಕೌಪೀನವನ್ನು ಧರಿಸಿದ್ದನು. ಮೈಮೇಲೆ ಹುಲಿದೊಗಲನ್ನು ಹೊತ್ತಿದ್ದನು. ಮೈತುಂಬ ಭಸ್ಮವನ್ನು ಹಚ್ಚಿದ್ದನು. ರುದ್ರಾಕ್ಷ ಮಾಲೆಗಳು ಅವನ ಕೊರಳಲ್ಲಿ ಅಲೆದಾಡುತ್ತಿದ್ದವು. ಅವನು ಮಂದಹಾಸದಿಂದ ನೇತಾಜಿಯ ಬಳಿಗೆ ಬಂದು:--"ವತ್ಸಾ, ಏಳು; ಹೀಗೆ ಮಲಗಿಕೊಂಡರೆ ಆಗುವದೇನು? ಪ್ರಯತ್ನ ಮಾಡು" ಎಂದು ನುಡಿದು, ಬೆನ್ನು ಚಪ್ಪರಿಸಿದನು. ಕೂಡಲೆ ನೇತಾಜಿಗೆ ಎಚ್ಚರವಾಯಿತು ಕಣ್ಣು ತೆರೆದು ನೋಡಲು, ಅಲ್ಲಿ ಯಾರೂ ಇದ್ದಿಲ್ಲ. ಸ್ವಪ್ನ ದೃಷ್ಟಾಂತವು ಅವನಿಗೆ ಚೆನ್ನಾಗಿ ಸ್ಮರಣೆಯಲ್ಲಿತ್ತು. ಗುರುಮಹಾರಾಜರೇ, ತನಗೆ ದರ್ಶನ ಕೊಟ್ಟು, ಪ್ರಯತ್ನ ಮಾಡೆಂದು ಬೋಧಿಸಿದರೆಂದು ಅವನು ತರ್ಕಿಸಹತ್ತಿದನು. ಅಷ್ಟರಲ್ಲಿ ದುರ್ಗದಲ್ಲಿಯ ಕೋಳಿಗಳು ಕೂಗಹತ್ತಿದ್ದರಿಂದ, ಇದು ಬೆಳಗಿನ ಸಮಯವೆಂದು ನೇತಾಜಿಯು ತಿಳಿದನು; ಮತ್ತು ಸ್ವಪ್ನವು ನಿಜವೆಂದು ಭಾವಿಸಿ, ಏನು ಪ್ರಯತ್ನ ಮಾಡಬೇಕೆಂದು ಯೋಚಿಸತೊಡಗಿದನು.

# ಬಂಧಮುಕ್ತ ನೇತಾಜಿ.

ಗುರುಮಹಾರಾಜರು ಕೊಟ್ಟ ದೃಷ್ಟಾಂತವು ಸುಳ್ಳಾಗದೆಂದು ನೇತಾಜಿಗೆ ದೃಢವಾದ ನಂಬಿಕೆಯಿತ್ತು; ಆದರೆ ನೆಲಮನೆಯು ಅತ್ಯಂತ ಭದ್ರವಾದದ್ದೆಂದು ಅವನು ತಿಳಿದದ್ದರಿಂದ, ಇದುವರೆಗೂ ಅವನು ಯಾವ ಪ್ರಯತ್ನಕ್ಕೂ ಹೋಗಿದ್ದಿಲ್ಲ. ಈ ದಿನ ಅವನು ನೆಲಮನೆಯಲ್ಲಿ ಸಂಪೂರ್ಣವಾಗಿ ಅಡ್ಡಾಡಿ ನೋಡಿದನು. ಅಲ್ಲಿಯ ದುರ್ಗಂಧವನ್ನು ಸೇವಿಸಿ-ಸೇವಿಸಿ, ಅವನ ಮೂಗು ಕಟ್ಟಿ ಹೋಗಿತ್ತು. ನೇತಾಜಿಯು ಬಹಳ ಹೊತ್ತು ವಿಚಾರ ಮಾಡಿ, ಯಾವಾಗ ನೆಲಮನೆಯನ್ನು ಅಡ್ಡಾಡಿ ನೋಡಹತ್ತಿದನೋ, ಆಗ ಎರಡು ತಾಸು ಹೊತ್ತು ಏರಿತ್ತು. ಅವನು ಗೋಡೆಗಳಿಗೆ ಕೈ ಬಡಿಬಡಿದು ನೋಡಿದನು. ಎಲ್ಲಿಯಾದರೂ ನೆಲಮಾರ್ಗವಿರುವುವೇನೆಂದು ಪರೀಕ್ಷಿಸಿದನು. ನಿಜವಾಗಿ ಆ ನೆಲಮನೆಯಲ್ಲಿ ಒಂದು ಗುಪ್ತಮಾರ್ಗವಿತ್ತು. ದುರ್ಗವು ಶತ್ರುಗಳ ಕೈಗೆ ಸಿಕ್ಕರೆ, ಒಳಗಿನವರು ಓಡಿಹೋಗಲಿಕ್ಕೆಂದು ಆ ನೆಲಮನೆಯಲ್ಲಿ ಒಂದು ಕಳ್ಳಹಾದಿಯನ್ನು ಮಾಡಿದ್ದರು; ಆ ಮಾರ್ಗವು ಸಿಕ್ಕಿದ್ದರೆ ನೇತಾಜಿಯು ಯಾವಾಗಲೋ ಪಲಾಯನಹೇಳಿಸುತ್ತಿದ್ದನ; ಆದರೆ ಅವನಿಗೆ ಆ ಮಾರ್ಗವು ದೊರೆಯಲಿಲ್ಲ. ಅವನು ಪ್ರತಿಯೊಂದು ಭಾಗದ ಗೋಡೆಗಳನ್ನು ಸೂಕ್ಷ್ಮವಾಗಿ ನೋಡುತ್ತಿರಲು, ಪೂರ್ವಭಾಗದ ಗೋಡೆಯು ಬಹಳ ದಪ್ಪವಾಗಿರುವದಿಲ್ಲೆಂಬದು ಅವನಿಗೆ ಕಂಡು ಬಂದಿತು; ಮತ್ತು ಆ ಗೋಡೆಯ ಹೊರಗೆ ಕೇವಲ ಬೈಲು ಪ್ರದೇಶವೇ ಇರುವದೆಂಬದು ಗೊತ್ತಾಯಿತು. ಗೋಡೆಯಲ್ಲಿರುವ ಸೂಕ್ಷ್ಮ ಛಿದ್ರಗಳಿಂದ ಹೊರಗಿನ ಮಂದಪ್ರಕಾಶವು ಕಾಣಹತ್ತಿದ್ದರಿಂದ ನೇತಾಜಿಯು ಹೀಗೆ ತರ್ಕಿಸಿದನು. ಈ ತರ್ಕದಿಂದ ಅವನಿಗೆ ಬಹು ಮಟ್ಟಿಗೆ ಸಮಾಧಾನವಾಯಿತು. ಅಷ್ಟರಲ್ಲಿ ಒಬ್ಬ ಮನುಷ್ಯನು ಆಹಾರವನ್ನು ತಕ್ಕೊಂಡು ಬಂದನು. ಅವನನ್ನು ನೋಡಿ ನೇತಾಜಿಗೆ ವಿಚಿತ್ರವಾಗಿ ತೋರಿತು. ಆಗ ಅವನು ಆಹಾರ ತಂದವನನ್ನು ಕುರಿತು:—"ಇಂದು

ಆಹಾರವನ್ನೇಕೆ ತಂದೆ? ಕಿಲ್ಲೇದಾರರು ಸಂಗಡ ಏಕೆ ಬಂದಿರುವದಿಲ್ಲ?" ಎಂದು ಕೇಳಿದನು. ಆಗ ಆಹಾರವನ್ನು ತಂದ ಮರಾಟನು ನುಡಿದ ನೇನಂದರೆ:—"ಮೊದಲಿನ ಕಿಲ್ಲೇದಾರರು ಬಾದಶಹನ ಹುಕುಮಿನ ಮೇರೆಗೆ ವಿಜಾಪುರಕ್ಕೆ ಹೊರಟು ಹೋದರು. ಅವರ ಸ್ಥಳದಲ್ಲಿ ಇಂದು ಇನ್ನೊಬ್ಬ ಕಿಲ್ಲೇದಾರರು ಬಂದಿರುತ್ತಾರೆ. ಈ ಹೊಸ ಕಿಲ್ಲೇ ದಾರರು ಬಹು ಸುಸ್ವಭಾವದವರು. ಇವರು ನಿಮಗೆ ಆಹಾರ ಕೊಡ ಬೇಕೆಂದು ಅಪ್ಪಣೆ ಮಾಡಿದ್ದರಿಂದ ತಂದಿರುವೆನು."

ಆಹಾರ ತಂದ ಮರಾಟನು ಹೇಳಿದ ಮಾತುಗಳಿಂದ ನೇತಾ ಜಿಗೆ ಮತ್ತಿಷ್ಟು ಆನಂದವಾಯಿತು; ಯಾಕಂದರೆ, ಪಾರಾಗಿ ಹೋಗುವ ಪ್ರಯತ್ನ ಮಾಡಲಿಕ್ಕೆ ಅವನಿಗೆ ಹೆಚ್ಚು ಆಸ್ಪದ ಸಿಕ್ಕಂತಾಯಿತು. ಸಂಜೆಯ ವರೆಗೆ ಅವನು ಸುಮ್ಮನಿದ್ದನು. ರಾತ್ರಿಯಲ್ಲಿ ಎಲ್ಲರಿಗೂ ನಿದ್ದೆ ಹತ್ತಿದ ಬಳಿಕ, ಅವನು ನೆಲಮನೆಯ ಬಾಗಿಲಿಗೆ ಹಚ್ಚಿದ ಕಬ್ಬಿ ಣದ ಗಜಗಳನ್ನು ಒಳ್ಳೇ ಕಸುವಿನಿಂದ ಕಿತ್ತುಕೊಂಡನು. ಬಳಿಕ ಅವನು ಆ ಗಜಗಳ ಸಹಾಯದಿಂದ ಪೂರ್ವಭಾಗದ ಗೋಡೆಗಳ ಕಲ್ಲು ಗಳನ್ನು ಸಡಿಲಿಸಲಾರಂಭಿಸಿದನು. ಅವನು ಬೆಳತನಕ ಕಷ್ಟಬಟ್ಟು ನಾಲ್ಕಾರು ಕಲ್ಲುಗಳನ್ನು ತೆಗೆದನು. ಇನ್ನೊಂದು ದಿನ ಕಷ್ಟಬಟ್ಟರೆ ಗೋಡೆಗೆ ಕಿಂಡಿ ಬೀಳುವದೆಂಬದು ಅವನಿಗೆ ನಂಬಿಗೆಯಾಯಿತು.

ಆ ದಿನ ಒಂಬತ್ತನೇ ದಿವಸವಾಗಿತ್ತು. ಫಾಜಲಖಾನನೇ ಕಿಲ್ಲೇ ದಾರನಾಗಿದ್ದರೆ, ಇಂದು ನೇತಾಜಿಯಿದ್ದ ನೆಲಮನೆಯ ಬಾಗಿಲವನ್ನು ಗಚ್ಚು-ಕಲ್ಲುಗಳಿಂದ ಪೂರ್ಣವಾಗಿ ಕಟ್ಟಿಸಿ ಬಿಡುತ್ತಿದ್ದನು; ಆದರೆ ಹಿಂದೆ ಹೇಳಿದಂತೆ ಅವನು ವಿಜಾಪುರಕ್ಕೆ ಹೊರಟು ಹೋಗಿದ್ದು, ಅವನ ಸ್ಥಳದಲ್ಲಿ ರುಸ್ತುಮ ಅಜಮಲ್ಲನೆಂಬ ಬೇರೊಬ್ಬ ಕಿಲ್ಲೇದಾರನು ಬಂದಿದ್ದನು. ಈ ಹೊಸ ಕಿಲ್ಲೇದಾರನು ಯಾರೆಂಬದು ನಮ್ಮ ವಾಚಕ ರಿಗೆ ಗೊತ್ತಿರುವದು. ಇವನು ವಿಜಾಪುರದಿಂದ ಸಾತಾರೆಯ ಕಿಲ್ಲೇದಾರ ನಾಗಿ ಬಂದ ಬಳಿಕ, ಅವನಿಗೆ ನೇತಾಜಿಯೆಂಬ ಒಬ್ಬ ಮರಾಟ ಜಾತಿಯ ಶೂರನು ದುರ್ಗದ ನೆಲಮನೆಯಲ್ಲಿರುವನೆಂಬದು ಗೊತ್ತಾಯಿತು.

ನೇತಾಜಿಯು ಗಂಗೂಸುಂದರಿಯ ಅಣ್ಣನೆಂಬದು ಆತನಿಗೆ ಈ ಮೊದಲೇ ಗೊತ್ತಾಗಿತ್ತು. ತಾನು ಗಂಗೂಸುಂದರಿಯನ್ನು ಸೆರೆಹಿಡಿದಾಗ ಸ್ಮೃತಿ ದಪ್ಪಿ ನೆಲಕ್ಕೆ ಬಿದ್ದ ನೇತಾಜಿಯು ಬದುಕಿ ಉಳಿದು, ಶಿವಾಜಿಯ ಸಹಾಯದಿಂದ ಪ್ರಸಿದ್ಧಿಗೆ ಬಂದಿರುವನೆಂಬದನ್ನು ಅವನು ಕೇಳಿದ್ದನು. ಇಷ್ಟೇ ಅಲ್ಲದೆ, ಕಲ್ಯಾಣದ ಕಿಲ್ಲೆಯಲ್ಲಿ ಅವನ ಪರಾಕ್ರಮವನ್ನು ಕಂಡು ಆಶ್ಚರ್ಯಚಕಿತನಾಗಿದ್ದನು. ಇಂಥ ವೀರನು ಈಗ ತನ್ನ ಸೆರೆಯಾಳಾಗಿರುವನೆಂದು ಅವನಿಗೆ ಒಂದು ಬಗೆಯಿಂದ ಸಮಾಧಾನವೆನಿಸಿತು. ಗಂಗೂಸುಂದರಿಯು ತನ್ನ ನೆರವಿನಲ್ಲಿದ್ದು, ಆಕೆಯು ತನ್ನನ್ನು ನಿಕಾಮಾಡಿಕೊಳ್ಳಲಿಕ್ಕೆ ಒಡಂಬಟ್ಟಿದ್ದಿಲ್ಲಾದ್ದರಿಂದ ಆಕೆಗೆ ಅಣ್ಣನ ಬಿಡುಗಡೆಯ ಆಶೆ ತೋರಿಸಿ, ಅವಳ ಮನಸ್ಸನ್ನು ತನ್ನ ಕಡೆಗೆ ಜಗ್ಗಿಕೊಳ್ಳಬೇಕೆಂದು ಆ ಧೂರ್ತ ರುಸ್ತುಮನು ಹವಣಿಕೆ ಹಾಕಿದನು; ಆದರೆ ಕೂಡಲೆ ಅದು ಅವನಿಗೆ ಅಪ್ರಶಸ್ತವಾಗಿ ತೋರಿತು; ಯಾಕಂದರೆ ನೇತಾಜಿಯಂಥ ಪ್ರಬಲ ವ್ಯಕ್ತಿಯನ್ನು ಸೆರೆಯಿಂದ ಬಿಡುವದು ಅವನ ಅಧಿಕಾರದ ಹೊರಗಿನ ಮಾತಾಗಿತ್ತು. ಆದ್ದರಿಂದ ಅವನು ಗಂಗೂಸುಂದರಿಗೆ ಸುಮ್ಮನೆ ವಚನ ಕೊಟ್ಟು, ಹಿಂದಿನಿಂದ ಸೆರೆಯಾಳನ್ನು ಬಿಡದಿದ್ದರೆ, ವೃಥಾ ಆ ಸುಂದರಿಯ ಕೋಪಕ್ಕೆ ಕಾರಣವಾಗಬೇಕಾದೀತೆಂದು ಅಂಜಿದನು. ನೇತಾಜಿಯು ತನ್ನ ಸೆರೆಯಲ್ಲಿರುವನೆಂಬ ಸುದ್ದಿಯು ಕೂಡ ಆಕೆಗೆ ಹತ್ತದಂತೆ ಅವನು ಜಾಗರೂಕನಾಗಿದ್ದನು.

ರುಸ್ತುಮನು ದಿನಾಲು ಗಂಗೂಸುಂದರಿಯ ಬಳಿಗೆ ಹೋಗುತ್ತಿದ್ದನು. ಒಮ್ಮೊಮ್ಮೆ ಅವನಿಗೆ ಅತಿಶಯ ಕಾಮೋದ್ದೀಪನವಾಗಿ ನೇತಾಜಿಯ ಸುದ್ದಿಯನ್ನು ಹೇಳಿ, ಈ ಸುಂದರಿಯ ಮನಸ್ಸನ್ನು ಪ್ರಸನ್ನ ಮಾಡಿಕೊಳ್ಳಲಿಯಾ? ಎನ್ನುವ ಹಾಗೆ ಆಗುತ್ತಿತ್ತು. ಆದರೂ ಆತನು ಮತ್ತೆ ವಿವೇಕವನ್ನು ತಂದುಕೊಂಡು, ಆ ಉಸಾಬರಿಯನ್ನು ತೆಗೆಯದೆ, ಮನಸ್ಸನ್ನು ಸಮಾಧಾನಪಡಿಸಿಕೊಂಡು, ತನ್ನ ಕೆಲಸಕ್ಕೆ ಹೊರಟು ಹೋಗುತ್ತಿದ್ದನು.

ಹೀಗೆ ರುಸ್ತುಮನು ನೇತಾಜಿಯ ಸುದ್ದಿಯನ್ನು ಹೇಳದಿದ್ದರೂ,

ಗಂಗೂ ಸುಂದರಿಗೆ ಅದು ಹ್ಯಾಗೋ ಗೊತ್ತಾಯಿತು. ದುರ್ಗದ ನೆಲ ಮನೆಯಲ್ಲಿ ನೇತಾಜಿಯೆಂಬೊಬ್ಬ ಮರಾಟನು ಸೆರೆಯಲ್ಲಿರುವನೆಂಬ ಸುದ್ದಿಯು ಆಕೆಗೆ ಹತ್ತಿತು. ತನ್ನ ಅಣ್ಣನಾದ ನೇತಾಜಿಯು ತನ್ನ ನಿಬ್ಬಣದ ಸುಲಿಗೆಯಲ್ಲಿಯೇ ಸತ್ತುಹೋಗಿರುವನೆಂದು ಅವಳು ತಿಳಿದಿದ್ದಳು; ಆದರೆ ಆ ಸಂಗತಿಯು ಅವಳಿಗೆ ಪೂರ್ಣವಾಗಿ ಗೊತ್ತಿಲ್ಲದ್ದರಿಂದ ಅನುಮಾನಕ್ಕೊಳಗಾದಳು. ಸೆರೆಮನೆಯಲ್ಲಿರುವ ನೇತಾಜಿಯು ತನ್ನ ಅಣ್ಣನೇ ಆಗಿರಬಹುದೆಂದು ಅವಳು ಬಹಳವಾಗಿ ಯೋಚಿಸಿದಳು. ಹಾಗಿದ್ದ ಪಕ್ಷದಲ್ಲಿ ಆತನ ಬಿಡುಗಡೆಗಾಗಿ ರುಸ್ತುಮ ಜಮಲ್ಲನಿಗೆ ಹೇಳಿಕೊಳ್ಳಲಿಯಾ? ಎಂಬ ವಿಚಾರವು ಕೂಡ ಆಕೆಯಲ್ಲಿ ಬಂದು ಹೋಯಿತು! ನೇತಾಜಿಯು ಆಕೆಗೆ ಒಡಹುಟ್ಟಿದ ಅಣ್ಣನಾದ್ದರಿಂದ ವಿಲಕ್ಷಣವಾದ ಬಂಧುಪ್ರೇಮವು ಅವಳಲ್ಲಿತ್ತು. ಕದಾಚಿತ್ ತಾನು ರುಸ್ತುಮನಲ್ಲಿ ಈ ಯಾಚನೆಯನ್ನು ಮಾಡಿದರೆ, ತಾನು ಆತನನ್ನು ನಿಕಾ ಮಾಡಿಕೊಳ್ಳುವ ಪ್ರಸಂಗ ಬರಬಹುದೆಂದು ಅವಳು ತರ್ಕಿಸಿದಳು. ಏನೇ ಆಗಲಿ; ಸೆರೆಯಲ್ಲಿದ್ದ ನೇತಾಜಿಯು ತನ್ನ ಅಣ್ಣನಾದ ನೇತಾಜಿಯೇ ಆಗಿದ್ದರೆ, ತನ್ನ ಪ್ರಾಣವನ್ನಾದರೂ ತ್ಯಾಗ ಮಾಡಿ, ಅವನನ್ನು ಬಂಧಮುಕ್ತನನ್ನಾಗ ಮಾಡಬೇಕೆಂದು ನಿರ್ಧರಿಸಿದಳು; ಆದರೆ ರುಸ್ತುಮನ ಮುಂದೆ ಈ ಮಾತನ್ನು ತೆಗೆಯಲಿಕ್ಕೆ ಅವಳಿಗೆ ಬಹಳ ಸಂಕೋಚವಾಗುತ್ತಿತ್ತು. ಅವಳ ಮನಸ್ಸು ಮರಾಟಾ ಸ್ತ್ರೀಯರ ಕುಲ-ಶೀಲಗಳನ್ನು ಬಿಡಲಿಕ್ಕೆ ಒಪ್ಪದಾಯಿತು. ಹೀಗೆ ಅವಳು ವಿಚಾರಗಳ ಎಳತಕ್ಕೆ ಸಿಕ್ಕು ಜಿಬ್ಬೆಯಾಗುತ್ತಿರಲು, ಒಂದು ದಿನ ರಾತ್ರಿಯಲ್ಲಿ ನೆಲಮನೆಗೆ ತಾನೇ ಹೋಗಿ, ನೇತಾಜಿಗೆ ಭೆಟ್ಟಿಯಾಗಿ ಬರಬೇಕೆಂಬ ಹಂಚಿಕೆಯು ಅವಳಿಗೆ ತೋಚಿತು. ಕಡೆಗೆ ಅದನ್ನೇ ಅವಳು ನಿರ್ಧರಿಸಿದಳು.

ಯಾವ ದಿವಸ ನೇತಾಜಿಯು ನೆಲಮನೆಗೆ ಕಿಂಡಿಯನ್ನು ಕೆಡವಿ ಓಡಿಹೋಗಬೇಕೆಂದು ಮಾಡಿದ್ದನೋ, ಆ ದಿವಸವೇ ಗಂಗೂಸುಂದರಿಯು ಸರಿ ರಾತ್ರಿಯಲ್ಲಿ ಯಾರಿಗೂ ತಿಳಿಯದಂತೆ ಆ ನೆಲಮನೆಗೆ ಬಂದಳು. ಅವಳು ಅಂದು ಹಗಲಿನಲ್ಲಿಯೇ ಆ ಮನೆಯ ದಾರಿಯನ್ನು

ವ್ಯಾಜಾಂತರದಿಂದ ನೋಡಿ ಬಂದಿದ್ದಳು. ಮೇಲಾಗಿ ರುಸ್ತುಮನು ಕಿಲ್ಲೆದಾರನಾದಂದಿನಿಂದ ನೆಲಮನೆಯ ಪಹರೆಯ ಕೆಲಸವು ಬಹಳ ಶಿಥಿಲವಾಗಿತ್ತು. ರಾತ್ರಿಯಲ್ಲಂತೂ ಅಲ್ಲಿ ಯಾರೂ ಇರುತ್ತಿರಲಿಲ್ಲ. ಯಾಕಂದರೆ, ನೆಲಮನೆಗೆ ಭದ್ರವಾದ ಬಾಗಿಲವಿತ್ತು. ಮೇಲಾಗಿ ಮುಂದೆ ಗೋಡೆಯೂ ಹಾಕಲ್ಪಟ್ಟಿತ್ತು. ಅದರಿಂದ ನೇತಾಜಿಯು ಅಲ್ಲಿಂದ ಓಡಿಹೋಗುವ ಭೀತಿಯೇ ಉಳಿದಿರಲಿಲ್ಲ. ಈ ಸಂಧಿಯಲ್ಲಿ ನೇತಾಜಿಗೆ ನೆಲಮನೆಯ ಬಾಗಿಲ ಮುರಿದು ಹೋಗಲಿಕ್ಕೆ ಬರುವ ಹಾಗಿತ್ತು; ಆದರೆ ಹೊರಗಿನ ವಿಚಾರವು ಅವನಿಗೆ ತಿಳಿಯದ್ದರಿಂದ ಲೂ ಮೇಲಾಗಿ ಬಾಗಿಲು ಮುರಿದು ಹೋದರೆ ಪುನಃ ಕಿಲ್ಲೆಯೊಳಗೇ ಹೋಗಬೇಕಾಗುತ್ತಿರುವದರಿಂದಲೂ ಇದು ಮತ್ತಿಷ್ಟು ಗಂಡಾಂತರ ವೆಂದು ತಿಳಿದು, ನೇತಾಜಿಯು ಆ ಹುಚ್ಚಿಗೆ ಹೋಗಿದ್ದಿಲ್ಲ.

ಗಂಗೂಸುಂದರಿಯು ನೆಲಮನೆಗೆ ಬಂದಾಗ ನೇತಾಜಿಯು ಗೋಡೆಗೆ ಕಿಂಡಿಯನ್ನು ಕೆಡವಿದ್ದು, ಅದರಲ್ಲಿ ತಲೆಹಾಕಿ ಇನ್ನು ಕೆಳಗೆ ಜಿಗಿಯಬೇಕೆಂಬ ಹಂಚಿಕೆಯಲ್ಲಿದ್ದನು. ಇನ್ನೊಂದು ಕ್ಷಣ ತಡೆದಿದ್ದರೆ, ಪಾಪ! ಗಂಗೂಸುಂದರಿಯು ಭಗ್ನಮನೋರಥಳಾಗಿ ವಿಲಕ್ಷಣ ಚಿಂತೆಗೆ ಒಳಗಾಗಬೇಕಾಗುತ್ತಿತ್ತು. ಗಂಗೂಸುಂದರಿಯು ನೆಲಮನೆಯ ಬಾಗಿಲ ಮುಂದೆ ಕಟ್ಟಿದ ಗೋಡೆಯ ಮೇಲೆ ನಿಂತು "ಅಣ್ಣಾ" ಎಂದು ಒದರಿ ದಳು. ಕೂಡಲೆ ನೇತಾಜಿಯು ಕಿಂಡಿಯನ್ನು ಬಿಟ್ಟು ಎದ್ದು ನಿಂತು:- ಎಲ, ಇದೇನು? ನಮ್ಮ ಗಂಗೂ! ಇಲ್ಲಿಗೆಲ್ಲಿಂದ ಬಂದಳು? ಎಂದು ಕೊಂಡನು. ಕ್ಷಣಹೊತ್ತು ಅವನಿಗೆ ಆಶ್ಚರ್ಯವಾಯಿತು. ಕೂಡಲೆ ಅವನಿಗೆ ಏನೋ ಒಂದು ಸಂಗತಿಯು ಹೊಳೆಯಲು, ಅವನ ಆಶ್ಚ ರ್ಯದ ಭರವು ತಗ್ಗಿತು. ಬಳಿಕ ಆತನು ಬರಿಯ 'ಓ' ಎಂದ್ಯ ನುಡಿಯದೆ, "ಗಂಗೂ" ಎಂದು ಕೂಗಿದನು. ಅದರಿಂದ ಗಂಗೂಸುಂ ದರಿಗೆ ಈತನು ತನ್ನ ಅಣ್ಣನೇ ಎಂಬದು ನಂಬಿಗೆಯಾಯಿತು. ಅಂಥ ಪ್ರಸಂಗದಲ್ಲೂ ಅವಳಿಗೆ ತನ್ನ ಅಣ್ಣನ ಭೆಟ್ಟಿಯಿಂದ ಬಹು ಸಂಭ್ರಮ ವೆನಿಸಿತು! ಕೂಡಲೆ ಅವಳು ತಾನು ಸೆರೆಯಲ್ಲಿದ್ದ ಹಾಗು ತನ್ನ ಅಣ್ಣನು

ಸೆರೆಯಲ್ಲಿದ್ದ ದುಃಖವನ್ನು ಮರೆತು ಬಿಟ್ಟಳು! ನೇತಾಜಿಯು ಬಾಗಿಲ ಸಮೀಪಕ್ಕೆ ಬರಲು, ಗಂಗೂಸುಂದರಿಯು ಆನಂದಾಶ್ರುಗಳನ್ನು ಉದುರಿಸುತ್ತ:—ಅಣ್ಣಾ, ಇದೇನು? ಎಷ್ಟೋ ದಿನಗಳ ಮೇಲೆ ನಿನ್ನ ಭೆಟ್ಟಿಯಾಯಿತು! ನಾನು ಒಳಗೆ ಹೇಗೆ ಬರಲಿ? ಎಂದಳು. ಆಗ ನೇತಾಜಿಯು:—ಗಂಗೂ, ನನ್ನ-ನಿನ್ನ ಈ ಭೆಟ್ಟಿಯು ನನ್ನ ಸಂತೋಷಕ್ಕಾಗಿಯೋ ಅಥವಾ ದುಃಖಕ್ಕಾಗಿಯೋ? ಎಂದು ಕೇಳಿದನು. ನೇತಾಜಿಯ ಮಾತಿನ ಧೋರಣವನ್ನು ಗಂಗೂಸುಂದರಿಯು ಕೂಡಲೆ ತಿಳಿದು:—ಅಣ್ಣಾ, ಹಾಗೆ ತಿಳಿಯಬೇಡ; ಇದುವರೆಗೂ ನಾನು ಯಾವ ಪಾಪವನ್ನೂ ಅರಿಯದವಳಾಗಿರುತ್ತೇನೆ, ಎಂದಳು. ನೇತಾಜಿಯು ಆಶ್ಚರ್ಯದಿಂದ:—ಏನು? ನೀನು ಒಬ್ಬ ಮುಸಲ್ಮಾನನೊಂದಿಗೆ ನಿಕಾ ಮಾಡಿಕೊಂಡಿರುವೆಯೆಂದು ಕೇಳಿದ್ದೇನೆ; ಅದು ನಿಜವೋ? ಎನಲು, ಗಂಗೂಸುಂದರಿಯು:—ಅಣ್ಣಾ, ನಾನು ಇದುವರೆಗೆ ಯಾವ ಮುಸಲ್ಮಾನನನ್ನೂ ಮದುವೆ ಮಾಡಿಕೊಂಡಿರುವದಿಲ್ಲ. ಒಬ್ಬ ಮುಸಲ್ಮಾನನ ಸೆರೆಯಲ್ಲಿ ಮಾತ್ರ ಇದ್ದೇನೆ, ಎಂದಳು. ನೇತಾಜಿಯು:—ಇದು ನಿಜವೇ? ಎಂದು ಪುನಃ ಪುನಃ ಕೇಳಿದನು. ಗಂಗೂಸುಂದರಿಯು ನಿಶ್ಚಯದ ಸ್ವರದಿಂದ:—ಅಣ್ಣಾ, ಪರಮೇಶ್ವರನ ಸಾಕ್ಷಿಯಾಗಿ ಹೇಳುತ್ತೇನೆ. ಈಗ ನಾನು ಹೇಳಿದ್ದರಲ್ಲಿ ಒಂದು ಅಕ್ಷರವಾದರೂ ಸುಳ್ಳಿರುವದಿಲ್ಲ. ನಿನ್ನ ಭೆಟ್ಟಿಗೆ ಈಗ ನಾನು ತಪ್ಪಿಸಿಕೊಂಡು ಬಂದಿರುತ್ತೇನೆ. ಇಷ್ಟೇ ಅಲ್ಲ, ಈ ನೆಲಮನೆಯಿಂದ ನೀನು ಜೀವಂತ ಪಾರಾಗುವ ಆಶೆಯಿರದ್ದರಿಂದ, ಈಗ ನಿನ್ನ ಭೆಟ್ಟೀ ತಕ್ಕೊಂಡು, ನಂತರ ಆತ್ಮಹತ್ಯೆ ಮಾಡಿ, ಈ ಪಾಪಮಯ ಲೋಕವನ್ನು ಬಿಟ್ಟು ಹೋಗಬೇಕೆಂದು ಮಾಡಿದ್ದೇನೆ. ಅಣ್ಣಾ, ನಮ್ಮಿಬ್ಬರ ಪ್ರಾಣವು ಹೀಗೆ ಶೋಚನೀಯ ಸ್ಥಿತಿಯಲ್ಲಿ ಹೋಗಬೇಕೆಂದು ಈಶ್ವರೀ ಸಂಕೇತವೇ ಇದ್ದಂತೆ ತೋರುತ್ತದೆ, ಎಂದಂದಳು.

ತಂಗಿಯ ಈ ನಿಶ್ಚಯಪೂರ್ವಕ ನುಡಿಗಳನ್ನು ಕೇಳಿ, ನೇತಾಜಿಗೆ ಬಹು ಸಮಾಧಾನವೆನಿಸಿತು. ಆಕೆಯು ಇದುವರೆಗೂ ಭ್ರಷ್ಟಳಾಗಿಲ್ಲ

ವೆಂಬದು ಅವನಿಗೆ ನಿಜವಾಗಿ ತೋರಿತು. ಆಗ ಅವನು:—"ತಂಗೀ ಈಶ್ವರೀ ಸಂಕೇತವಿರುವದೇ ನಿಜ. ಈ ಸಂಕೇತವು ಅಶುಭಕ್ಕಿರದೆ, ಶುಭಕ್ಕಿರುತ್ತದೆ. ನಿನ್ನೊಡನೆ ನಾನು ಈಗ ಇಲ್ಲಿಂದ ಪಾರಾಗಿ ಹೋಗುತ್ತೇನೆ. ಬಳಿಕ ನಾವು ನಮ್ಮ ಸ್ವರಾಜ್ಯದಲ್ಲಿ ಸೇರಿಕೊಳ್ಳೋಣ!" ಎಂದು ನುಡಿದು, ಗೋಡೆ ಬಿಟ್ಟು ದೂರ ಸರಿಯಲಿಕ್ಕೆ ಆಕೆಗೆ ಹೇಳಿದನು. ಕೂಡಲೆ ಗಂಗೂಸುಂದರಿಯು ಗೋಡೆ ಬಿಟ್ಟು ದೂರ ಸರಿದಳು. ನೇತಾಜಿಯು ತನ್ನ ವಿಲಕ್ಷಣ ಶಕ್ತಿಯಿಂದ ಒದ್ದು, ನೆಲಮನೆಯ ಆ ಬಾಗಿಲವನ್ನು ಮುರಿದು. ಮುಂದೆ ಕಟ್ಟಿದ ಗೋಡೆಯನ್ನೂ ಕೆಡವಿದನು. ಗಂಗೂಸುಂದರಿಯು ಒಳಗೆ ಹೋಗಿ ಪ್ರೇಮಾಶ್ರುಗಳಿಂದ ಅಣ್ಣನ ಚರಣಗಳನ್ನು ತೊಳೆದಳು. ಬಳಿಕ ನೇತಾಜಿಯು ತಾವು ಇಲ್ಲಿಂದ ಹೇಗೆ ಪಾರಾಗಬೇಕೆಂಬ ಸಂಗತಿಯನ್ನು ಆಕೆಗೆ ತಿಳಿಸಿ, ತನ್ನ ತಲೆಗೆ ಸುತ್ತಿದ್ದ ಮುಂಡಾಸವನ್ನು ಬಿಚ್ಚಿ ಆಕೆಯ ಸೊಂಟಕ್ಕೆ ಕಟ್ಟಿದನು; ಮತ್ತು ಆಕೆಯನ್ನು ತಾನು ತೋಡಿದ ಕಿಂಡಿಯಿಂದ ಹೊರಗೆ ಇಳಬಿಟ್ಟನು. ಗೋಡೆಯ ಹೊರಗೆ ಎರಡು ಆಳಿನ ಕೆಳಗೆ ಒಂದು ವಿಶಾಲವಾದ ಬಂಡೆಗಲ್ಲು ಇತ್ತು; ಆದರ ಮೇಲೆ ಗಂಗೂಸುಂದರಿಯು ಭದ್ರವಾಗಿ ನಿಂತುಕೊಂಡಳು; ಮತ್ತು ಸೊಂಟಕ್ಕೆ ಕಟ್ಟಿದ ಮುಂಡಾಸವನ್ನು ಬಿಚ್ಚಿದಳು. ನೇತಾಜಿಯು ಆ ಮುಂಡಾಸವನ್ನು ಮೇಲಕ್ಕೆ ಎಳೆದುಕೊಂಡು, ಅದರದೊಂದು ತುದಿಯನ್ನು ಆ ನೆಲಮನೆಯಲ್ಲಿ ತಾನು ಕಡಿಮೊಟ್ಟಿರುವ ಕಲ್ಲುಗಳಿಗೆ ಕಟ್ಟಿ, ಅದರ ಸಹಾಯದಿಂದ ಮೆಲ್ಲನೆ ಹೊರಗಿನ ಬಂಡೆಯ ಮೇಲೆ ಇಳಿದನು. ಬಳಿಕ ಅವನು ಗಂಗೂಸುಂದರಿಯನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡು ಇಳಿಜಾರಾಗಿದ್ದ ಸ್ಥಳವನ್ನು ನೋಡಿ ಕಂದಕದಲ್ಲಿಳಿದು, ಕಂದಕದಲ್ಲಿಯ ನೀರಿನಲ್ಲಿ ಈಸಿ, ಆಚೇ ದಂಡೆಗೆ ಹತ್ತಿದನು.

ನೇತಾಜಿಯು ದಂಡೆಗೆ ಯಾವಾಗ ಬಂದನೋ, ಆಗ ಅವನಿಗೆ ಜೀವದಲ್ಲಿ ಜೀವ ಬಂದಂತಾಯಿತು. ಬಳಿಕ ಅವನು ಒಂದು ಕ್ಷಣ ಸಹ ಅಲ್ಲಿ ನಿಲ್ಲದೆ, ಗಂಗೂಸುಂದರಿಯನ್ನು ತನ್ನ ಹೆಗಲ ಮೇಲೆ ಕುಳ್ಳಿರಿಸಿ

ಕೊಂಡೇ ಬೆಳತನಕ ದಾರಿಯನ್ನು ನಡೆದನು. ಅವನು ಹಗಲೆಲ್ಲ ಯಾವದಾದರೊಂದು ಹಳ್ಳಿಯನ್ನು ಸೇರಿ ಗುಪ್ತವಾಗಿದ್ದು, ರಾತ್ರಿ ಬೆಳತನಕ ದಾರಿಯನ್ನು ನಡೆಯುತ್ತಿದ್ದನು. ಇದೇ ಕ್ರಮದಿಂದ ಅವನು ದಾರೀ ನಡೆಯುತ್ತ ಮುಂದೆ ಕೆಲ ದಿನಗಳಿಗೆ ಲೋಹಗಡಕ್ಕೆ ಬಂದು ಮುಟ್ಟಿದನು.

---

## ರುಸ್ತುಮ ಫಕೀರ.

ರುಸ್ತುಮನು ಬೆಳಗಿನ ಜಾವದಲ್ಲಿ ಎದ್ದು ನಮಾಜು ಮಾಡಿ ಕುಳಿತುಕೊಳ್ಳುವಷ್ಟರಲ್ಲಿ ಒಬ್ಬ ದೂತನು ಓಡುತ್ತ ಬಂದನು. ಅವನು ಅವಸರದಿಂದ ಓಡಿ ಬಂದನು ಮಾತ್ರ; ಆದರೆ ತಾನು ಬಂದ ಕಾರಣವನ್ನು ಸುಭೇದಾರನಿಗೆ ಹೇಳಲಿಕ್ಕೆ ಅವನ ನಾಲಿಗೆಯು ತಡವರಿಸಹತ್ತಿತು. ಅದನ್ನು ಕಂಡು ರುಸ್ತುಮನು ಸಿಟ್ಟಾಗಿ:—"ಏ ಬದ್ಮಾಷ್, ಏನು ಹೇಳಬೇಕೆನ್ನುತ್ತೀ? ಬೇಗನೆ ಸ್ಪಷ್ಟವಾಗಿ ಹೇಳು" ಎಂದು ಗದ್ದರಿಸಿದನು. ದೂತನು ಗಾಬರಿಗೆಟ್ಟು ಅರೆ ಅಕ್ಷರಗಳನ್ನು ಚ್ಚರಿಸುತ್ತ, 'ದುರ್ಗದ ನೆಲಮನೆಯೊಳಗಿನ ಸೆರೆಯಾಳು ಓಡಿಹೋಗಿರುವನು' ಎಂದು ಹೇಳಿದನು. ಅಷ್ಟರಲ್ಲಿ ಅಂತಃಪುರದೊಳಗಿನ ಓರ್ವ ದಾಸಿಯು ಸಣ್ಣ ಮೋರೆ ಮಾಡಿಕೊಂಡು ರುಸ್ತುಮನ ಬಳಿಗೆ ಬಂದು:-'ಖಾವಿಂದ, ಗಂಗೂಸುಂದರಿಯು........' ಎಂದಳು. ಮುಂದೆ ಹೇಳುವದಕ್ಕೆ ಅವಳಿಗೆ ಧೈರ್ಯವಾಗಲಿಲ್ಲ. ಸೆರೆಯಾಳು ಓಡಿ ಹೋಗಿರುವನೆಂಬ ಸುದ್ದಿಯನ್ನು ಕೇಳಿ, ರುಸ್ತುಮನು ತಪ್ತನಾಗಿದ್ದನು. ಅದರಲ್ಲಿ ದಾಸಿಯು ಬಂದು "ಗಂಗೂಸುಂದರಿ...." ಎಂದು ಉಚ್ಚರಿಸಿ ಸುಮ್ಮನಾಗಲು, ಅವನ ಪಿತ್ಥವು ತಲೆಗೇರಿತು. ಆಗ ಅವನು ಸಂತಾಪದಿಂದ:—"ಏ ಲವಂಡೀ, ಏನು ಹೇಳುವದನ್ನು ಪೂರ್ಣ ಹೇಳು" ಎಂದು ಗದ್ದರಿಸಿದನು. ದಾಸಿಯು ಅಂಜುತ್ತಂಜುತ್ತ:—"ಗಂಗೂಸುಂದರಿಯು ಅಂತಃಪುರದಲ್ಲಿರುವದಿಲ್ಲ." ಎಂದಳು. ಗಂಗೂಸುಂದರಿಯು ಇಲ್ಲ

ವೆಂಬ ಶಬ್ದವನ್ನು ಶ್ರವಣ ಮಾಡಿದ ಬಳಿಕಂತೂ ರುಸ್ತುಮನು ಸಿಟ್ಟಿನಿಂದ ಹುಚ್ಚನಾದನು. ಆಕೆಯು ಎಲ್ಲಿರುವಳೆಂಬದನ್ನು ಶೋಧ ಮಾಡಲಿಕ್ಕೆ ಎಲ್ಲ ದಾಸಿಯರಿಗೂ ಆಜ್ಞೆ ಮಾಡಿದ್ದಲ್ಲದೆ, ಒಂದುವೇಳೆ ಆಕೆಯ ಶೋಧವನ್ನು ಹಚ್ಚದಿದ್ದರೆ, ಎಲ್ಲ ದಾಸಿಯರನ್ನೂ ತೋಫಿನ ಬಾಯಿಗೆ ಕೊಡುತ್ತೇನೆಂದು ಗದ್ದರಿಸಿದನು. ದಾಸಿಯರು ಹೌಹಾರಿ ಹೋದರು! ಮುಂದೇನು ಮಾಡಬೇಕೆಂಬದು ಅವರಾರಿಗೂ ತಿಳಿಯದಾಯಿತು.

ಮಣ್ಣು, ಹೊನ್ನು, ಹೆಣ್ಣುಗಳಲ್ಲಿ ಎಂಥ ಮಾಯಾಶಕ್ತಿಯಿರುತ್ತದೆಂಬದನ್ನು ಹೇಳಲಿಕ್ಕೇ ಬೇಡ. ಇವುಗಳಲ್ಲಿ ಆಸಕ್ತನಾದವನು ಕೊನೆಗೆ ಹುಚ್ಚನಾಗುವದೇ ನಿಜ. ಅದರಲ್ಲಿ ಎಲ್ಲಕ್ಕೂ ಕೊನೆಯದಾದ ಹೆಣ್ಣಿನ ಹುಚ್ಚು ವಿಲಕ್ಷಣವಾಗಿರುವದು. ಆ ಹುಚ್ಚು ಬುದ್ಧಿಯನ್ನು ಭ್ರಷ್ಟಮಾಡುವದು. ವೈಭವವನ್ನು ನಷ್ಟಗೊಳಿಸುವದು. ಕಡೆಗೆ ಶರೀರಕ್ಕೆ ಕಷ್ಟ ಕೊಡುವದು. ರಾವಣನು ಹೆಣ್ಣಿನ ಹುಚ್ಚಿನಿಂದಲೇ ಹತನಾದನು. ಪೌರಾಣಿಕ ಪುರುಷರು ಹೋಗಲಿ; ಆಧುನಿಕರಲ್ಲಿ ಎಷ್ಟು ಜನರು ಈ ಹುಚ್ಚಿನಿಂದ ಭಿಕ್ಷಾಪಾತ್ರೆಯನ್ನು ಹಿಡಿದಿರುವದಿಲ್ಲ? ಇರಲಿ.

ಪ್ರಕೃತದಲ್ಲಿ ರುಸ್ತುಮ ಅಜಮಲ್ಲನಿಗೂ ಈ ಹುಚ್ಚು ಬಡಿದುಕೊಂಡಿತು. ಅವನು ತನ್ನ ಸೆರೆಯಾಳು ಓಡಿಹೋದದ್ದರ ಪರವೆಯನ್ನು ಬಿಟ್ಟು, ಗಂಗೂಸುಂದರಿಯ ಶೋಧಕ್ಕೆ ನಿಂತನು. ಅವನು ಅಂತಃಪುರದ ಎಲ್ಲ ದಾಸಿಯರನ್ನೂ ಸಿಪಾಯಿಗಳನ್ನೂ ಕಳಿಸಿದನು. ಇವರಲ್ಲದೆ ತಾನೂ ನೋಡಬೇಕಾದ ಸ್ಥಳಗಳನ್ನು ನೋಡಿದನು; ಆದರೆ ಆಕೆಯ ಶೋಧವು ಹತ್ತಲಿಲ್ಲ. ಎಲ್ಲ ದಾಸಿಯರೂ, ಸಿಪಾಯಿಗಳೂ ದುರ್ಗವನ್ನೆಲ್ಲ ಶೋಧಿಸಿ, ಕೈಚಾಡಿಸುತ್ತ ತಿರುಗಿ ಬಂದರು. ಗಂಗೂಸುಂದರಿಯು ಎಲ್ಲಿ ಹೋಗಿರುವಳೆಂಬದು ಅವನಿಗೆ ತಿಳಿಯದಾಯಿತು. ಅವನು ಬಹಳ ಹೊತ್ತಿನ ವರೆಗೆ ಚಿಂತಿಸಿದನು. ಆಗ ಅವನಿಗೊಂದು ಸಂಗತಿಯು ಹೊಳೆಯಿತು. ಕೂಡಲೆ ಅವನು ನೆಲಮನೆಗೆ ಹೋಗಿ ನೋಡಿದನು. ಒಂಬತ್ತು ಗಜಗಳುಳ್ಳ ಬಾಗಿಲವು ಮುರಿದು

ಬಿದ್ದಿದ್ದು, ಅದರ ಮುಂದೆ ಕಟ್ಟಿದ್ದ ಗೋಡೆಯೂ ಬಿದ್ದಿತ್ತು. ಅದನ್ನೂ ಹಾಗು ನೆಲಮನೆಯ ಪೂರ್ವಭಾಗದ ಗೋಡೆಯ ಕಿಂಡಿಯನ್ನೂ ನೋಡಿ, ಆತನಿಗೆ ನಡೆದ ಪ್ರಕಾರವೆಲ್ಲ ಹೊಳೆಯಿತು. ನೇತಾಜಿಯೇ ಗಂಗೂಸುಂದರಿಯನ್ನು ಎಬ್ಬಿಸಿಕೊಂಡು ಹೋಗಿರುವನೆಂಬದು ಅವನಿಗೆ ತಿಳಿಯಿತು.

ರುಸ್ತುಮನಿಗೆ ಗಂಗೂಸುಂದರಿಯು ಪಂಚಪ್ರಾಣವಾಗಿದ್ದಳು. ತಾನು ಆಕೆಯನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದು, ತನ್ನನ್ನು ಆಕೆಯು ಪ್ರೀತಿಸುವದಿಲ್ಲೆಂಬದು ಅವನಿಗೆ ಗೊತ್ತಿತ್ತು; ಆದರೂ ಅವನು ಆಕೆಯನ್ನು ತನ್ನ ಮೋಹವೆಂಬ ಪಂಜರದಲ್ಲಿ ಸಾಕಿದ ಪಂಚರಂಗಿ ಗಿಳಿಯೆಂದೇ ಭಾವಿಸಿದ್ದನು. ಆ ಗಿಳಿಯು ಇಂಥ ಭದ್ರವಾದ ಪಂಜರವನ್ನು ಒಡೆದು, ಹೀಗೆ ಓಡಿ ಹೋದೀತೆಂಬ ಕಲ್ಪನೆಯು ಮಾತ್ರ ಇದುವರೆಗೆ ಅವನಿಗಿದ್ದಿಲ್ಲ. ಈ ಗಿಳಿಯು ಇಂದಿಲ್ಲ ನಾಳೆಗೆ ತನ್ನೊಡನೆ ಮುದ್ದು ಮಾತುಗಳನ್ನಾಡಿ, ತನ್ನನ್ನು ಆನಂದಗೊಳಿಸುವದೆಂದು ಅವನು ಪೂರ್ಣವಾಗಿ ನಂಬಿದ್ದನು. ಅವನಿಗೆ ಕುಳಿತಾಗ, ನಿಂತಾಗ, ದರ್ಬಾರೀ ಕೆಲಸ ಮಾಡುವಾಗ ಆ ಸುಂದರಿಯ ಸುಂದರರೂಪವು ಕಣ್ಣೆದುರಿಗೆ ಕಟ್ಟಿದಂತಾಗುತ್ತಿತ್ತು! ಸಾತಾರೆಯ ಕಿಲ್ಲೇದಾರನಾಗಿ ಬಂದ ಬಳಿಕಂತೂ ಗಂಗೂಸುಂದರಿಯ ದರ್ಶನವಿಲ್ಲದೆ ಅವನಿಗೆ ಸಮಾಧಾನವೇ ಆಗುತ್ತಿದ್ದಿಲ್ಲ. ಅವನು ದಿನವೊಂದಕ್ಕೆ ನಾಲ್ಕಾರು ಸಾರೆಯಾದರೂ ಆಕೆಯ ಮಂದಿರಕ್ಕೆ ಹೋಗುತ್ತಿದ್ದನು. ಇದಲ್ಲದೆ ತನಗೆ ಆಕೆಯನ್ನು ಬೇಕಾದಾಗ ನೋಡಲಿಕ್ಕೆ ಅನುಕೂಲವಾಗಬೇಕೆಂದು ಆಕೆಯಿರುವ ಮಂದಿರದ ರಚನೆಯನ್ನೇ ಬದಲು ಮಾಡಿದ್ದನು ಇದರಿಂದ ಅವನಿಗೆ ಗುಪ್ತವಾಗಿ ಆಕೆಯನ್ನು ನೋಡಲಿಕ್ಕೆ ಅನುಕೂಲವಾಗಿತ್ತು. ಈ ಗುಪ್ತಮಾರ್ಗದಿಂದ ಅವನು ಆಕೆಯ ದರ್ಶನವನ್ನು ದಿನವೊಂದಕ್ಕೆ ಹಲವು ಸಾರೆ ತಕ್ಕೊಳ್ಳುತ್ತಿದ್ದನು. ಆಕೆಯು ನಿದ್ದೆಯಲ್ಲಿರುವಾಗ ಅವಳ ಸೌಂದರ್ಯದ ಸೊಬಗನ್ನು ಬೀರುವ ಅವಯವಗಳನ್ನು ನೋಡಿ, ತನ್ನ ಧನ್ಯತೆಯನ್ನು ತಾನೇ ಹೊಗಳಿಕೊಳ್ಳುತ್ತಿದ್ದನು. ಈ ಗಂಗೂ

ಸುಂದರಿಯ ಹಂಬಲದಲ್ಲಿ ಅವನು ತನ್ನ ಝುನಾನಖಾನೆಯನ್ನು ಮರೆತೇ ಬಿಟ್ಟಿದ್ದನು. ಆತನ ಜನಾನಖಾನೆಯಲ್ಲಿ ರೂಪವತಿಯರಾದ ಅನೇಕ ಜನ ತರುಣಿಯರು ಅವನ ದಾರಿಯನ್ನು ಕಾಯುತ್ತಿದ್ದರೂ, ಅವನು ಆ ಕಡೆಗೆ ಹಣಿಕಿ ಸಹ ಹಾಕುತ್ತಿದ್ದಿಲ್ಲ. ಇದರಿಂದ ಆತನ ಝುನಾನ ಖಾನೆಯಲ್ಲಿ ಎಲ್ಲ ಕಡೆಗೂ ಔದಾಸೀನ್ಯತೆಯು ನೆಲೆಗೊಂಡಿತ್ತು.

ಸೆರೆಯಲ್ಲಿದ್ದ ಮರಾಟರ ಹುಡಿಗೆಯು ಓಡಿ ಹೋದಳೆಂಬ ಸುದ್ದಿ ಯಿಂದ ರುಸ್ತುಮನ ಝುನಾನಖಾನೆಯು ಚೇತರಿಸಿಕೊಂಡಿದ್ದಿತು. ಅಲ್ಲಿಯ ಹೆಂಗಳೆಯರಿಗೆ ಒಳ್ಳೇ ಆನಂದವಾಯಿತು. ಯಾವ ತರುಣಿ ಯಿಂದ ಅವರೆಲ್ಲರ ಸುಖವು ಸೂರೆಗೊಂಡಂತಾಗಿತ್ತೋ, ಆ ತರುಣಿಯು ಒಮ್ಮಿಂದೊಮ್ಮೆಲೆ ಇಲ್ಲದಂತಾಗಲು ಅವರಿಗೊಂದು ಭಯಂಕರ ವಾದ ಕಂಟಕವು ದೂರಾದಷ್ಟು ಹರುಷವಾಯಿತು. ಪಾಪ! ಆ ಹೆಂಗ ಳೆಯರಿಗೆ ಸ್ವಲ್ಪ ಹೊತ್ತಿನಲ್ಲಿಯೇ ತಾವು ಮಹಾದುಃಖದಲ್ಲಿ ಬೀಳುವೆ ವೆಂಬದು ಹೇಗೆ ತಿಳಿಯಬೇಕು? ಆಹಾ! ಸಂಸಾರದಲ್ಲಿ ಎಷ್ಟು ಸೋ- ಜಿಗವಿರುವದು ನೋಡಿರಿ!! ಪೂರ್ವಕ್ಷಣದಲ್ಲಿ ಸ್ವರ್ಗಸೌಖ್ಯದಿಂದ ನಲಿ ದಾಡುತ್ತಿದ್ದ ಪ್ರಾಣಿಗೆ, ಉತ್ತರಕ್ಷಣದಲ್ಲಿ ದುಃಖವೆಂಬ ಬಹು ಆಳ ವಾದ ಕಂದಕದಲ್ಲಿ ಬೀಳುವೆನೆಂಬದು ಸ್ವಲ್ಪ ಸಹ ತಿಳಿಯುವದಿಲ್ಲವಲ್ಲ! ಮನುಷ್ಯನು ಬೇಕಾದಂಥ ಘೋರಣಾವನ್ನು ಕಟ್ಟುವನು; ಮುತ್ಸದ್ದಿ ಗಿರಿಯನ್ನು ವ್ಯಕ್ತಮಾಡುವನು; ದುರ್ಬೀನುಗಳಿಂದ ಬಹು ದೂರದ ಪ್ರದೇಶಗಳನ್ನು ಕೂಡ ನೋಡಬಲ್ಲನು; ಆದರೆ ತನ್ನ ಕಾಲೊಳಗೇ ಇರುವ ದುಃಖವೆಂಬ ಮಹಾಸಾಗರವು ಮಾತ್ರ ಅವನಿಗೆ ಎಂದೂ ಕಾಣಿಸುವದಿಲ್ಲವಲ್ಲ! ಜಗತ್ತಿನಲ್ಲಿ ಇದಕ್ಕಿಂತಲೂ ಹೆಚ್ಚಿನ ಸೋಜಿಗ ವಿನ್ನಾವುದಿರುವದು?

ಪಂಚಪ್ರಾಣಗಳು ಹೊರಟು ಹೋಗಲು, ದೇಹವು ನಿಷ್ಕಳೆ ಯುಳ್ಳದ್ದಾಗುವಂತೆ, ಪಂಚಪ್ರಾಣದಂತಿದ್ದ ಗಂಗೂಸುಂದರಿಯು ಹೊರಟು ಹೋಗಲು ರುಸ್ತುಮನು ಕಳಾಶೂನ್ಯನಾದನು. ಅವನ ಉಲ್ಲಾಸವೇ ಕುಗ್ಗಿಹೋಯಿತು. ಅವನಿಗೆ ಆ ಮಂದಿರವು ಮಸಣ

ಗಟ್ಟಿಯಂತೆ ತೋರಹತ್ತಿತು. ಕಿಲ್ಲೆದಾರಿಕೆಯ ಅಧಿಕಾರವು ಮಸಣ ಗಟ್ಟಿಯನ್ನು ಕಾಯುವ ಅಧಿಕಾರವಾಗಿ ತೋರಿತು. ಝುನಾನಖಾನೆಯ ಹೆಂಗಳೆಯರಿಂದ ಅವನಿಗೆ ಎಳ್ಳಷ್ಟೂ ಉಲ್ಲಾಸವುಂಟಾಗಲಿಲ್ಲ. ಮುದ್ದು ಬರುವ ತನ್ನ ಚಿಕ್ಕ-ಪುಟ್ಟ ಮಕ್ಕಳಿಂದ ಆತನ ದುಃಖವು ಉಪಶಮನ ಹೊಂದಲಿಲ್ಲ. ನಿರಂಕುಶವಾದ ಅಧಿಕಾರವು ಆ ದುಃಖವನ್ನು ತಡೆಯ ಲಿಲ್ಲ. ಅಪಾರವಾದ ವೈಭವವು ಆವನ ಮನಸ್ಸನ್ನು ರಮಿಸಲಿಲ್ಲ. ಗಂಗೂಸುಂದರಿಯ ರೂಪವೊಂದು ಮಾತ್ರ ನಿಶ್ಚಲವಾಗಿ ಅವನ ಮುಂದೆ ನಿಂತುಕೊಂಡಿತ್ತು!

ನೋಡನೋಡುವಷ್ಟರಲ್ಲಿ ರುಸ್ತುಮನು ತನ್ನ ಮೈಮೇಲಿನ ಬೆಲೆಯುಳ್ಳ ವಸ್ತ್ರಾಭರಣಗಳನ್ನು ಕಳಚಿ ಚಲ್ಲಿದನು. ಸಾಮಾನ ಉಡುಗೆಗಳನ್ನು ಧರಿಸಿ, ತತ್ಕ್ಷಣದಲ್ಲಿಯೇ ದುರ್ಗವನ್ನು ತ್ಯಜಿಸ್ಯಿ ಎತ್ತೋ ಹೋಗಿಬಿಟ್ಟನು! ಗಂಗೂಸುಂದರಿಯ ಹುಚ್ಚಿನಿಂದ ರುಸ್ತು ಮನು ಫಕೀರನಾದನೆಂದು ಅವನ ಝುನಾನಖಾನೆಯವರು ದುಃಖ ಸಾಗರದಲ್ಲಿ ಮುಳುಗಿದರು!

***

## ಅಗ್ನಿಪ್ರವೇಶ!

ಈ ಮೇರೆಗೆ ಸಾತಾರೆಯ ಕಿಲ್ಲೆಯಲ್ಲಿ ಅವ್ಯವಸ್ಥೆಯಾಗಿ ರುಸ್ತು ಮನು ಫಕೀರನಾಗಲು, ಇತ್ತ ನೇತಾಜಿಯು ಹಿಂದೆ ಹೇಳಿದಂತೆ ಲೋಹಗಡಕ್ಕೆ ಗಂಗೂಸುಂದರಿಯೊಡನೆ ಸುರಕ್ಷಿತವಾಗಿ ಬಂದು ಮು-ಟ್ಟಿದನು. ನೇತಾಜಿಯು ಮುಸಲ್ಮಾನರ ಸೆರೆಯೊಳಗಿಂದ ಸುರಕ್ಷಿವಾಗಿ ಪಾರಾಗಿ ಬಂದದ್ದಕ್ಕೆ ಶಿವಾಜಿಮಹಾರಾಜರಿಗೂ, ಜಿಜಾಬಾಯಿಗೂ, ನೇತಾಜಿಯ ತಾಯಿ-ತಂದೆಗಳಿಗೂ ಹೇಳಕೂಡದಷ್ಟು ಸಂತೋಷ ವಾಯಿತು! ಕಾಶಿಗೆ ಆದ ಆನಂದವನ್ನಂತೂ ವರ್ಣಿಸಲೇ ತೀರದು!! ಸಂಗೂಸುಂದರಿಯ ತಾಯಿ-ತಂದೆಗಳು ವೃದ್ಧರಾಗಿದ್ದರು. ಕೇವಲ ಅಪ್ಸರೆಯಂತೆ ತೋರುವ ಮಗಳು ಮುಸಲ್ಮಾನರಿಂದ ಭ್ರಷ್ಟಳಾಗದೆ, ಕುಲ-ಶೀಲಗಳನ್ನುಳಿಸಿಕೊಂಡು ಪಾರಾಗಿ ಬಂದರೂ ಅವರಿಗೆ ಆನಂದ

ವಾಗಲಿಲ್ಲ; ಯಾಕಂದರೆ, ಬಹು ದಿವಸ ಮುಸಲ್ಮಾನರ ವಶದಲ್ಲಿದ್ದ ಇವಳು ಇದು ವರೆಗೆ ಪರಿಶುದ್ಧಳಾಗಿರಬಹುದೆ? ಎಂಬ ಸಂಶಯವು ಜನರಲ್ಲಿ ಸಹಜವಾಗಿ ಉದ್ಭವಿಸುತ್ತಿತ್ತು. ಆಗ ಆ ವೃದ್ಧರು ಚಿಂತಿಸಿದ್ದೇನಂದರೆ:—"ಗಂಗೂಸುಂದರಿಗಿನ್ನಾವ ಗತಿಯು? ರಾವಣನ ಮನೆಯಲ್ಲಿದ್ದುದಕ್ಕೆ ಜನರು ಲೋಕಮಾತೆಯಾದ ಸೀತೆಗೂ ಹೆಸರಿಟ್ಟರು. ಅಂದಬಳಿಕ ನಮ್ಮ ಕಂದಮ್ಮನ ಪಾಡೇನು? ಮೊದಲೇ ಮುಸಲ್ಮಾನರು ಉನ್ಮತ್ತರು; ಅದರಲ್ಲೂ ದುಷ್ಟಹೇತುವಿನಿಂದಲೇ ಗಂಗೂ ಸುಂದರಿಯನ್ನು ಹರಣಮಾಡಿಕೊಂಡೊಯ್ದವರು! ಅಂದಬಳಿಕ ಇಂಥವರು ಈಕೆಯನ್ನು ಪರಿಶುದ್ಧ ಸ್ಥಿತಿಯಲ್ಲಿರಗೊಟ್ಟಿರಬಹುದೆ? ಎಂದು ಜನರಾಡಿಕೊಳ್ಳಹತ್ತುವರು. ಈಕೆಯು ಪರಿಶುದ್ಧಳಾಗಿರುವಳೆಂಬದು ನಮಗೆ ನಂಬಿಗೆಯಿದೆ; ಯಾಕಂದರೆ, ಹಾಗೇನಾದರೂ ಮರ್ಯಾದೆಗೆ ಭಂಗ ತಟ್ಟಿದ್ದರೆ, ಈ ಸುಶೀಲೆಯು ನಮಗೆ ಮುಖ ಕೂಡ ತೋರಿಸದೆ, ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಳು; ಆದರೆ ಇದೆಲ್ಲ ಈಕೆಯ ಗುಣಪರೀಕ್ಷೆಯು ಜನರಿಗೆ ಹೇಗಾಗಬೇಕು? ಕಾಲಮಾನಕ್ಕನುಸರಿಸಿ ಅವರು ಕುತರ್ಕಕಟ್ಟತಕ್ಕವರೇ ಸರಿ! ಈ ಕುತರ್ಕದಿಂದ ಇನ್ನು ಮುಂದೆ ಈಕೆಯ ಲಗ್ನವಾಗುವ ಹಾಗಿಲ್ಲ. ಲಗ್ನವಾಗದೆ ಇದ್ದ ಬಳಿಕ, ಈಕೆಯನ್ನು ಯಾರು ಸಂರಕ್ಷಿಸಬೇಕು? ಯಾವದಾದರೊಂದು ವ್ಯುತ್ಪತ್ತಿಗೆಯಲ್ಲಿ ಇವಳು ಮತ್ತೆ ಮುಸಲ್ಮಾನರ ಕೈಗೆ ಸಿಗಬಹುದಲ್ಲವೆ?"

ಈ ಮೇರೆಗೆ ಗಂಗೂಸುಂದರಿಯ ವೃದ್ಧ ಮಾತಾ-ಪಿತೃಗಳು ಚಿಂತಿಸಹತ್ತಿದರು. ಆಕೆಯ ಸೌಂದರ್ಯದ ಸೊಬಗನ್ನು ನೋಡಿ-ನೋಡಿಯಂತೂ ಅವರಿಗೆ ಒಮ್ಮೆ ದುಃಖವಾಗುತ್ತಿತ್ತು; ಮತ್ತೊಮ್ಮೆ ವಡಗಾಂವದ ಶ್ರೀಮಂತರ ಮನೆಗೆ ಇವಳು ಬಿದ್ದಿದ್ದರೆ, ಇವಳ ಸಮಾನ ಪುಣ್ಯವತಿಯರು ಯಾರೂ ಇರುತ್ತಿದ್ದಿಲ್ಲವಲ್ಲ! ಎಂದು ಚಡಪಡಿಸುತ್ತಿದ್ದರು. ತಾಯಿ-ತಂದೆಗಳ ಚಿಂತೆಯ ಕಾರಣವು ಗಂಗೂಸುಂದರಿಗೆ ಹೊಳೆಯದೆ ಹೋಗಲಿಲ್ಲ. ಅವಳಾದರೂ ಮುಸಲ್ಮಾನರ ಸೆರೆಯಿಂದ ಬಿಡುಗಡೆ ಹೊಂದಿ ಬಂದಂದಿನಿಂದ ಮನಸ್ಸಿನಲ್ಲಿ ಇದನ್ನೇ

ಯೋಚಿಸುತ್ತಿದ್ದಳು. ತಾನು ಯಾವಾಗ ಈ ಪಾಪಮಯ ಲೋಕದಿಂದ ಮುಕ್ತಳಾದೇನು? ಎಂದು ಅವಳು ಬಯಸುತ್ತಿದ್ದಳು. ತನ್ನ ಈ ಹಂಬಲದಿಂದ ವೃದ್ಧ ಮಾತಾ-ಪಿತೃಗಳಿಗೆ ದುಃಖವಾಗಬಹುದೆಂದು ಅವಳು ಅಂಜುತ್ತಿದ್ದಳು. ಹೀಗಿರಲು, ತಾಯಿ-ತಂದೆಗಳಿಗಾದರೂ ಇದೊಂದು ನೀಗಲಾರದ ಚಿಂತೆಯಾಗಿದೆ, ಎಂದು ತಿಳಿಯಲು, ಅವಳು ಒಂದು ದಿನ ತನ್ನ ತಾಯಿ-ತಂದೆಗಳೂ, ಅಣ್ಣನೂ ಕೂಡಿ ಕುಳಿತಾಗ ಅವರೆಡೆಗೆ ಹೋಗಿ ನಮಸ್ಕರಿಸಿ, ನುಡಿದಳೇನಂದರೆ:—"ಶ್ರೀ ಭವಾನಿಮಾತೆಯ ಕೃಪೆಯಿಂದ ನಾನು ಇದು ವರೆಗೆ ಯಾವ ಪಾಪವನ್ನೂ ಅರಿಯದವಳಾಗಿರುತ್ತೇನೆ; ಆದರೆ ಇನ್ನು ಮುಂದೆ ಈ ಪಾಪಮಯ ಲೋಕದಲ್ಲಿರಲು ನನಗೆ ಇಚ್ಛೆಯಿಲ್ಲ; ಯಾಕಂದರೆ, ನನ್ನ ರೂಪವೇ ನನಗೆ ಶತ್ರುವಾಗಿರುವದು. ನನ್ನ ಮೇಲೆ ಯಾವ ಕಾಲಕ್ಕೆ ಯಾವ ದುಷ್ಟರ ದೃಷ್ಟಿಯು ಬಿದ್ದೀತೆಂಬದರ ನಿಯಮವಿಲ್ಲ. ಮೇಲಾಗಿ ಇನ್ನು ಮೇಲೆ ನಾನು ಬದುಕಿರುವದಾದರೂ ಯಾತರ ಸಲುವಾಗಿ? ಕೇವಲ ವಿಟಂಬನೆಗಾಗಿಯೇ ಇರಬೇಕಾಗುವದಲ್ಲವೆ? ಆದ್ದರಿಂದ ತಮ್ಮಡಿದಾವರೆಗಳಲ್ಲಿ ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ, ಇನ್ನು ನನಗೆ ಇಹಲೋಕವನ್ನು ತ್ಯಜಿಸಲಿಕ್ಕೆ ಅಪ್ಪಣೆಯನ್ನು ಕೊಡಿರಿ."

ಗಂಗಾಸುಂದರಿಯ ಈ ಬಗೆಯ ಮಾತುಗಳನ್ನು ಕೇಳಿ, ಆಕೆಯ ಮಾತಾಪಿತೃಗಳಿಗೂ ನೇತಾಜಿಗೂ ಬಹು ದುಃಖವೆನಿಸಿತು. ಆಕೆಯ ಸರಳ ಹೃದಯವು ಅವರ ಕಣ್ಮುಂದೆ ಕಟ್ಟಿತು ಅವರು ಪರಿಪರಿಯಿಂದ ಆಕೆಗೆ ಅಭಯವನ್ನು ಕೊಟ್ಟರು; ಆದರೂ ಆ ಸುಂದರಿಯು ಜಗತ್ತಿನಲ್ಲಿರಲು ಒಪ್ಪಲಿಲ್ಲ. ಕಡೆಗೆ ಅವಳು ಲೋಕಮಾತೆಯಾದ ಸೀತಾದೇವಿಯು ಅಗ್ನಿಕಾಷ್ಠವನ್ನು ಭಕ್ಷಿಸಿ ತನ್ನ ಪರಿಶುದ್ಧತೆಯನ್ನು ಜಗತ್ತಿಗೆ ತೋರಿಸಿದಂತೆ, ತಾನೂ ಅಗ್ನಿಕಾಷ್ಠವನ್ನು ಭಕ್ಷಿಸಿ, ಕೀರ್ತಿಶೇಷಳಾಗುತ್ತೇನೆಂದು ಹಟ ಹಿಡಿದಳು ಆಕೆಯನ್ನು ಸಮಾಧಾನಪಡಿಸಲು ಯಾರಿಗೂ ಸಾಧ್ಯವಾಗಲಿಲ್ಲ. ಆಕೆಯ ಈ ವಿಚಾರಗಳು ವಾಸ್ತವವಾದವುಗಳಿರುತ್ತವೆಂದೇ ಎಲ್ಲರಿಗೂ ಅನಿಸಿತು.

ನೇತಾಜಿಯು ಈ ಸಂಗತಿಯನ್ನು ಶಿವಾಜಿ ಮಹಾರಾಜರಿಗೆ ತಿಳಿಸಿದನು. ಅವರಿಗಾದರೂ ಗಂಗೂಸುಂದರಿಯ ಈ ವಿಚಾರಗಳನ್ನು ತಿಳಿದು ಆಶ್ಚರ್ಯವೆನಿಸಿತು. ಅವರು ಆಕೆಯ ವಿಷಯವಾಗಿ ಧನ್ಯೋದ್ಗಾರಗಳನ್ನು ತೆಗೆದು:—"ಗಂಗೂಸುಂದರಿಯ ಕುಲೀನತೆಗೆ ಈ ಮಾತು ಒಪ್ಪತಕ್ಕದ್ದೇ; ಆದರೆ ಆಕೆಯ ಮನಸ್ಸಿನ ನಿಶ್ಚಯವನ್ನು ನೋಡಿ ಮುಂದೆ ಮಾಡುವದನ್ನು ಮಾಡಿರಿ" ಎಂದು ನುಡಿದರು. ನೇತಾಜಿಯು ಮನೆಗೆ ಬಂದು ಗಂಗೂಸುಂದರಿಯ ಈ ವಿಚಾರವನ್ನು ಬಿಡಿಸಬೇಕೆಂದು ಬಹಳವಾಗಿ ಪ್ರಯತ್ನ ಮಾಡಿದನು ಕಡೆಗೂ ಸಾಧ್ಯವಾಗಲಿಲ್ಲ.

ಮುಂದೊಂದು ದಿನ ಲೋಹಗಡದ ವಿಶಾಲವಾದ ಒಂದು ಮರಡಿಯ ಒಳಿಗೆ ಪ್ರಚಂಡವಾದ ಅಗ್ನಿಯು ಸಿದ್ಧವಾಯಿತು. ಸೌಗಂಧಿಕ ಕಾಷ್ಠಗಳ ಸುವಾಸನೆಯು ಸುತ್ತಲೂ ಪಸರಿಸಿತು. ಗಂಗೂಸುಂದರಿಯು ಅಂದು ಎರಕೊಂಡು ರೇಶ್ಮಿಯ ವಸ್ತ್ರವನ್ನುಟ್ಟುಕೊಂಡಿದ್ದಳು. ಆಕೆಯ ಮುಖವು ಪೌರ್ಣಿಮೆಯ ಚಂದ್ರನಂತೆ ಪ್ರಫುಲ್ಲಿತವಾಗಿತ್ತು ಅವಳು ಸೌಭಾಗ್ಯದ್ರವ್ಯಗಳಿಂದ ಅಲಂಕೃತಳಾಗಿದ್ದಳು ಲೋಹಗಡದೊಳಗಿನ ಎಲ್ಲ ಸ್ತ್ರೀ-ಪುರುಷರೂ ಅಲ್ಲಿ ನೆರೆದಿದ್ದರು. ಶಿವಾಜಿ ಮಹಾರಾಜರೂ ಆ ಸಾಧ್ವಿಯ ನಿರ್ಯಾಣವನ್ನು ನೋಡುವದಕ್ಕೆ ಬಂದಿದ್ದರು.

ಚಿತೆಯು ಒಳ್ಳೇ ಪ್ರಜ್ವಲಿಸಲು, ಗಂಗೂಸುಂದರಿಯು ಮೊದಲು ತನ್ನ ಮಾತಾ-ಪಿತೃಗಳ ಚರಣಗಳ ಮೇಲೆ ಮಸ್ತಕವನ್ನಿಟ್ಟು, ಬಳಿಕ ಅಣ್ಣನಿಗೆ ನಮಸ್ಕರಿಸಿ, ತನ್ನ ಬಾಲಸಖಿಯೂ ಈಗ ನಾದಿನಿಯೂ ಆದ ಕಾಶಿಗೆ ಅಭಿವಂದಿಸಿದಳು. ನಂತರ ಅವಳು ಕೂಡಿದ ಜನಸಮೂಹಕ್ಕೆಲ್ಲ ಕೈಮುಗಿದು, ಅಗ್ನಿಗೆ ಒಮ್ಮೆ ಪ್ರದಕ್ಷಿಣೆಯನ್ನು ಹಾಕಿ, ಸರ್ವರೂ ನೋಡನೋಡುತ್ತಿರಲು, ಅಗ್ನಿಯನ್ನು ಪ್ರವೇಶ ಮಾಡಿದಳು!! ಸಮಸ್ತರೂ ಆಕೆಗೆ ಧನ್ಯೋದ್ಗಾರಗಳನ್ನು ಸಮರ್ಪಿಸಿದರು! ಕುಲಸ್ತ್ರೀಯರು ಆ ಚಿತೆಯ ಮೇಲೆ ಹೂವಿನ ಮಳೆಗರೆದರು!!

§ § §

ಗಂಗೂ ಸುಂದರಿಯು ಸುಂದರವಾದ ದೇಹವು ಕ್ಷಣದಲ್ಲಿ ಭಸ್ಮೀಭೂತವಾಯಿತು. ಮೂರನೆಯ ದಿನ ನೇತಾಜಿಯು ಆ ಸಾಧ್ವಿಯ ಅಸ್ಥಿಗಳನ್ನಾರಿಸಿ ನದಿಯಲ್ಲಿ ಚಲ್ಲಿದನು. ಆ ಕೂಡಲೆ ಒಬ್ಬ ಫಕೀರನು ನದಿಯಲ್ಲಿ ಮುಳುಗಿ ಆ ಅಸ್ಥಿಗಳನ್ನು ಹೊರಗೆ ತಂದನು; ಮತ್ತು ಅವನ್ನು ಆ ನದಿಯ ದಂಡೆಯ ಮೇಲೆ ಒಂದು ತೆಗ್ಗು ತೋಡಿ, ಹುಗಿದು, ಮೇಲೊಂದು ಗೋರಿಯನ್ನು ಕಟ್ಟಿ, ಅದರ ಬಳಿಯಲ್ಲಿ ಕುಳಿತು:—"ಗಂಗೂ-ಗಂಗೂ" ಎಂದು ಜಪಮಾಡತೊಡಗಿದನು!

ಪ್ರಿಯವಾಚಕರೇ, ಈ ಫಕೀರನು ಯಾರಾಗಿರಬಹುದು? ಗಂಗೂ ಸುಂದರಿಯ ಸಲುವಾಗಿ ಕಿಲ್ಲೆದಾರಿಕೆಯನ್ನು ತೊರೆದ ರುಸ್ತುಮ ಅಜಮಲ್ಲನೇ ಅವನಿರಬಹುದೆಂದು ನಿಮಗೆ ಹೊಳೆದಿರಬಹುದಲ್ಲವೇ? ನೋಡಿರಿ! ಸ್ತ್ರೀವ್ಯಾಮೋಹವು ಎಷ್ಟು ಬಲವತ್ತರವಾಗಿರುವದೆಂಬದನ್ನು!!

—×—

**ಸಂಪೂರ್ಣ**